
ಸಂಪಾದಕರು :
ಾ|| ವಾಮನ ಬೇಂದ್ರೆ
ಅಂಬಿಕಾತನಯದತ್ತ
ಬೇಂದ್ರೆ ಕಂಡ ಶ್ರೀಮಾತಾರವಿಂದರು
(ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಸ್ವರ ಸಂಯೋಜನೆ ಒಳಗೊಂಡು)

# ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು

"ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು" ಇದು ವರಕವಿ ಡಾ|| ದ. ರಾ. ಬೇಂದ್ರೆಯವರ ಒಂದು ಅಪೂರ್ವ ಕೃತಿ. ಇದರಲ್ಲಿ "ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತೆ" ಹಾಗೂ "ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀ ಅರವಿಂದರು" ಈ ಭಾಗಗಳಲ್ಲಿ ಬೇಂದ್ರೆಯವರು ಅವರ ಗುರುದ್ವಯರಾದ ಶ್ರೀಮಾತೆ ಹಾಗೂ ಶ್ರೀ ಅರವಿಂದರರನ್ನು ಕುರಿತು ಬರೆದ ೧೬ ಕವನಗಳನ್ನು ಸೇರ್ಪಡೆಮಾಡಿ, ಇವುಗಳಿಗೆ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಸ್ವರ ಸಂಯೋಜನೆಯೊಂದಿಗೆ ಪ್ರಕಟಿಸಲಾಗಿದೆ. ಬೇಂದ್ರೆ ಕವನಗಳಿಗೆ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದನ್ವಯ ಸ್ವರಸಂಯೋಜನೆಯನ್ನು ಮಾಡುವ ಬೃಹತ್ ಯೋಜನೆಯನ್ನು ಹಮ್ಮಿಕೊಂಡು, ಈ ಯೋಜನೆಯ ಅಂಗವಾಗಿ ಈಗಾಗಲೇ ಐದು ಸಂಕಲನಗಳನ್ನು ಬೇಂದ್ರೆ ಸಂಗೀತ ಅಕ್ಯಾಡೆಮಿ ಪ್ರಕಟಿಸಿದೆ. "ಅಂಬಿಕಾತನಯನ ಹಾಡS ಬೆಳದಿಂಗಳ ನೋಡS", "ನೋಡ್ಯಾನS ದಶಾವತಾರ ಅಂಬಿಕಾತನಯ ಹಾಡ್ಯಾನS", "ಅಂಬಿಕಾತನಯದತ್ತ ಬೇಂದ್ರೆ ಕಂಡ ಬೆನಕ", "ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರಾವಣ", "ಅಂಬಿಕಾತನಯದತ್ತ ಬೇಂದ್ರೆ ಋತು ದರ್ಶನ" ಈ ಕೃತಿಗಳನ್ನು ಈಗಾಗಲೇ ಪ್ರಕಟಿಸಲಾಗಿದೆ. ಈ ಸಂಗೀತ ಸೌರಭಮಾಲಿಕೆಗೆ ಆರನೆಯ ಕುಸುಮ-"ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು". ಬೇಂದ್ರೆ ಕಾವ್ಯ ಜನಮನದಲ್ಲಿ ನಿರಂತರವಾಗಿ ತಾಂಡವವಾಡುವಂತೆ ಮಾಡುವ ಒಂದು ಹೊಸ ಉಪಕ್ರಮ ಇದಾಗಿದೆ. ಕಾವ್ಯ-ಸಂಗೀತ ಸಂಗಮ ಈ ಕೃತಿಗಳು. ರಸಿಕ ಸಮುದಾಯ ಈ ಕೃತಿಗಳನ್ನು ಸ್ವಾಗತಿಸುವರೆಂಬ ವಿಶ್ವಾಸ ನಮ್ಮದಾಗಿದೆ.

ಬೇಂದ್ರೆ ಸಂಗೀತ ಅಕಾಡೆಮಿ ಸಂಗೀತ ಲೋಕದಲ್ಲಿ "ಬೇಂದ್ರೆ ಸಂಗೀತ"ದ ಹೊಸ ಪರಂಪರೆಯನ್ನು ಸೃಷ್ಟಿಸುವ ಉದ್ದೇಶದಿಂಧ ಬೇಂದ್ರೆ ಕಾವ್ಯಕ್ಕೆ ಹಿಂದೂಸ್ತಾನಿ ಸಂಗೀತ ಸಂಯೋಜನೆ ಮಾಡಿ ಈ ಕೃತಿಗಳನ್ನು ಪ್ರಕಟಿಸುತ್ತಿದೆ. "ಬೇಂದ್ರೆ ಸಂಗೀತ" ಅಮರವಾಗುವಂತೆ ಮಾಡುವುದೇ ನಮ್ಮ ಅಕ್ಯಾಡೆಮಿಯ ಉದ್ದೇಶವಾಗಿದೆ.

- ಪ್ರಕಾಶಕರು



# ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು

(ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಸ್ವರ ಸಂಯೋಜನೆ ಒಳಗೊಂಡು)



ವರಕವಿ ಡಾ|| ದ. ರಾ. ಬೇಂದ್ರೆ ವಿರಚಿತ

# ಅಂಬಿಕಾತನಯದತ್ತ

# ಬೇಂದ್ರೆ ಕಂಡ ಶ್ರೀಮಾತಾರವಿಂದರು

(ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಸ್ವರ ಸಂಯೋಜನೆ ಒಳಗೊಂಡು)

ಸಂಪಾದಕರು :

ಡಾ|| ವಾಮನ ಬೇಂದ್ರೆ

ಸಂಗೀತ ಸಂಯೋಜಕರು :

ಶ್ರೀ ಕೃಷ್ಣಾಜಿ ಕುರ್ತಕೋಟಿ

ಕಲೆ :

ಶ್ರೀ ಸುರೇಶ ಕುಲಕರ್ಣಿ

ಪ್ರಕಾಶಕರು :

ಡಾ|| ಕೆ. ಎಸ್. ಶರ್ಮಾ, ನಿರ್ದೇಶಕರು,

ವರಕವಿ ಡಾ|| ದ. ರಾ. ಬೇಂದ್ರೆ ಸಂಶೋಧನ ಸಂಸ್ಥೆ

ಹಾಗೂ ಬೇಂದ್ರೆ ಸಂಗೀತ ಅಕಾಡೆಮಿ, ಹುಬ್ಬಳ್ಳಿ

★ AMBIKATANAYADATTA BENDRE KANDA SHREEMATARAVINDARU
(A Collection of Poems by DR. D. R. BENDRE
comprising of Musical Notations for Hindustani Classical)

★ Edited by : Dr. Vaman Bendre.

★ Art by : Sri. Suresh Kulkarni.

★ Music Compositions by : Sri Krishnaji Kurtkoti.

★ D. T. P. :Sri Iranna B. Noolvi - D.T.P. Section - Dr. K. S. Sharma I. T. C., Hubli

★ Published by : Dr. K. S. Sharma,
Director, Poet Laureate Dr.D.R.Bendre Research Institute and Bendre Sangeeth Academy,
"Vishwashrama Chetana", Gokul Road, Hubli- 580 030. (Phone 0836-2330466)

★ First Edition : 1000 copies

★ Published on : 25-2-2005
(On the occasion of the 109th Birth Anniversary of Dr. D. R. Bendre & 5th Anniversary of Bendre Research Institute : 25-2-2005-Gurupratipada)

★ Price : Rs.40-00



★ ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು
ವರಕವಿ ಡಾ॥ದ.ರಾ.ಬೇಂದ್ರೆ ರಚನೆ : ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತಕ್ಕೆ ಸ್ವರ ಸಂಯೋಜನೆ ಒಳಗೊಂಡ ಕವನಗಳ ಸಂಕಲನ

★ ಸಂಪಾದಕರು : ಡಾ॥ ವಾಮನ ಬೇಂದ್ರೆ.

★ ಕಲೆ : ಶ್ರೀ ಸುರೇಶ ಕುಲಕರ್ಣಿ.

★ ಸಂಗೀತ ಸಂಯೋಜನೆ : ಶ್ರೀ ಕೃಷ್ಣಾಜಿ ಕುರ್ತಕೋಟಿ.

★ ಪುಟ ವಿನ್ಯಾಸ : ಶ್ರೀ ಈರಣ್ಣ ಬ. ನೂಲ್ವಿ - ಡಿ.ಟಿ.ಪಿ. ವಿಭಾಗ, ಡಾ. ಕೆ. ಎಸ್. ಶರ್ಮಾ ಕೈ. ತ. ಕೇಂದ್ರ, ಹುಬ್ಬಳ್ಳಿ

★ ಮುದ್ರಕರು : ಶರ್ಮಾ ಮುದ್ರಕರು ಹಾಗೂ ಪ್ರಕಾಶಕರು, ೪, ಪತ್ರಕರ್ತರ ಕಾಲೋನಿ, ಹುಬ್ಬಳ್ಳಿ-೩೨

★ ಪ್ರಕಾಶಕರು ಹಾಗೂ ಪುಸ್ತಕಗಳು ದೊರೆಯುವ ಸ್ಥಳ :
ಡಾ॥ ಕೆ. ಎಸ್. ಶರ್ಮಾ,
ನಿರ್ದೇಶಕರು, ವರಕವಿ ಡಾ॥ ದ. ರಾ. ಬೇಂದ್ರೆ ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡೆಮಿ,
'ವಿಶ್ವ ಶ್ರಮಚೇತನ', ಗೋಕುಲ ರಸ್ತೆ, ಬಸವೇಶ್ವರ ನಗರ, ಹುಬ್ಬಳ್ಳಿ-೫೮೦ ೦೩೦

★ ರವೀಂದ್ರ ಪುಸ್ತಕಾಲಯ,
ಕಾರ್ಗಲ್ ಕಾಲೋನಿ. ಸಾಗರ - 577 421, ದೂರವಾಣಿ : 08186-228616.

★ ಮೊದಲ ಮುದ್ರಣ : ೧೦೦೦ ಪ್ರತಿಗಳು

★ ಮೊದಲ ಪ್ರಕಟಣೆ : (ಡಾ॥ ದ. ರಾ. ಬೇಂದ್ರೆಯವರ ೧೦೯ನೇ ವಾರ್ಷಿಕ ಜನ್ಮದಿನ ಹಾಗೂ
ಬೇಂದ್ರೆ ಸಂಶೋಧನ ಸಂಸ್ಥೆಯ ೫ನೇ ವಾರ್ಷಿಕೋತ್ಸವದ ಪ್ರಯುಕ್ತ : ೨೫-೨-೨೦೦೫ - ಗುರುಪ್ರತಿಪದಾ)



★ ಬೆಲೆ : ರೂ.೪೦-೦೦

# ಅರ್ಪಣೆ

"ಔದುಂಬರ ಗಾಥೆ" ಅಂಬಿಕಾತನಯದತ್ತ ಮಹಾಕಾವ್ಯದ ನಾಯಕ-ನಾಯಕಿ ಸಖ-ಸಖಿಯರಾದ ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಹಾಗೂ ಲಕ್ಷ್ಮೀಬಾಯಿ ದತ್ತಾತ್ರೇಯ ಬೇಂದ್ರೆ ಇವರ ಜೀವನವೇ ಒಲವಿನ ಸಿದ್ಧಾಂತಕ್ಕೆ ಜೀವಂತ ಸಾಕ್ಷಿ. 'ಒಲವೆ ನಮ್ಮ ಬದುಕು'-ಈ ಸಖ-ಸಖಿಯರ ಬಾಳು. ಇದರ ಪವಿತ್ರ ಸ್ಮರಣೆಯ ಪ್ರತೀಕವೇ "ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು".

ಅಂತೆಯೇ ಈ ಮಾತಾ-ಪಿತರಿಗೆ ಈ ಅಪೂರ್ವ ಕೃತಿಯ ಆತ್ಮೀಯ ಅರ್ಪಣೆ

- ವಾಮನ ಬೇಂದ್ರೆ

# ಅನುಸೂಚಿ

# ಅನಾವರಣ

“ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು” - ಬೇಂದ್ರೆ ಸಂಗೀತ ಅಕ್ಯಾಡೆಮಿ ಪ್ರಕಾಶಗೊಳಿಸುತ್ತಿರುವ ಆರನೆಯ ಸಂಗೀತ ಕುಸುಮ. ಈಗಾಗಲೇ ಈ ಮಾಲಿಕೆಯಲ್ಲಿ ಐದು ಕುಸುಮಗಳು ಪ್ರಕಾಶಗೊಂಡಿವೆ. ಅವೆಂದರೆ “ಅಂಬಿಕಾತನಯನ ಹಾಡsಡs, ಬೆಳುದಿಂಗಳಾ ನೋಡs”, “ನೋಡ್ಯಾನs ದಶಾವತಾರ ಅಂಬಿಕಾತನಯ ಹಾಡ್ಯಾನs”, “ಅಂಬಿಕಾತನಯದತ್ತ ಬೇಂದ್ರೆ ಕಂಡ ಬೆನಕ”, “ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರಾವಣ”, ಹಾಗೂ “ಅಂಬಿಕಾತನಯದತ್ತ ಬೇಂದ್ರೆ ಋತು ದರ್ಶನ”. ಬೇಂದ್ರೆ ಸಂಗೀತ ಅಕ್ಯಾಡೆಮಿಯು ಪ್ರಕಾಶನ ಮಾಡುತ್ತಿರುವ ಮುಖ್ಯ ಗುರಿಯೆಂದರೆ, ಬೇಂದ್ರೆ ಕಾವ್ಯಕ್ಕೆ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಸೊಬಗನ್ನು ಒದಗಿಸಿ, ಪಶ್ಚಿಮ ಬಂಗಾಲದಲ್ಲಿ “ರವೀಂದ್ರ ಸಂಗೀತ” ಎಂದೇ ಜನಪ್ರಿಯತೆಯನ್ನು ಗಳಿಸಿದ ರವೀಂದ್ರ ಸಂಗೀತದಂತೆ, ವರಕವಿ-ವಿಶ್ವಕವಿ ಅಂಬಿಕಾತನಯದತ್ತ ದತ್ತಾತ್ರೇಯ ರಾಮಚಂದ್ರ ಬೇಂದ್ರೆ - ಇವರ ಕಾವ್ಯ “ಬೇಂದ್ರೆ ಸಂಗೀತ” ರೂಪ ತಾಳಿ, ಮನ್ನಣೆ ಪಡೆಯಬೇಕೆಂಬುದು. ಇದರೊಡನೆ ಬೇಂದ್ರೆ ಸಂಗೀತ ಅಕ್ಯಾಡೆಮಿಯ “ಮೆಗಾ ಪ್ಲ್ಯಾನ್” (Mega Plan) ಎಂದರೆ ಬೇಂದ್ರೆಯವರು ರಚಿಸಿದ ಕವನಗಳಲ್ಲಿ ಎಷ್ಟು ಕವನಗಳಿಗೆ ಶಾಸ್ತ್ರೀಯ ಸಂಗೀತದ ಸ್ವರಯೋಜನೆ ರಚಿಸಲು ಸಾಧ್ಯವೋ ಆ ಎಲ್ಲ ಕವನಗಳಿಗೂ ಸಂಗೀತ ಸಂಯೋಜನೆಯನ್ನು ಮಾಡಿಸಿ, ಅಂತಿಮವಾಗಿ ಈ ಕಾರ್ಯ ಪೂರ್ಣಗೊಂಡ ನಂತರ “ಸಮಗ್ರ ಬೇಂದ್ರೆ ಸಂಗೀತ” ಸಂಪುಟವನ್ನು ಪ್ರಕಟಿಸಿ, ಸಂಗೀತ ಶಾಸ್ತ್ರ ಸಾಹಿತ್ಯಕ್ಕೆ ಒಂದು ವಿನೂತನ ಕೊಡುಗೆಯನ್ನು ಸಲ್ಲಿಸುವುದಾಗಿದೆ. ಇದಲ್ಲದೆ ಬೇಂದ್ರೆ ಕಾವ್ಯದಲ್ಲಿ ಯಾವ ಯಾವ ವಿವಿಧ ಸಂಗೀತ ಪ್ರಕಾರಗಳಾದ ಸುಗಮ, ಜಾನಪದ, ಗಮಕ, ನಾಟ್ಯ ಸಂಗೀತ ಮುಂತಾದ ಪ್ರಕಾರಗಳಲ್ಲಿ ಹಾಡಲು ಹೊಂದುವ ಕವನಗಳನ್ನು ವಿಂಗಡಿಸಿ, ಆಯಾ ಹಾಡುಗಾರರಿಗೆ ಹಾಡಲು ಅನುಕೂಲವಾಗುವಂತೆ ಪ್ರಕಾಶನಗೊಳಿಸುವದು. ಈ ಕಾರ್ಯ ಮಾಡುವುದರಿಂದ “ಬೇಂದ್ರೆ ಸಂಗೀತ”ದ ವೈವಿಧ್ಯ, ವೈಶಿಷ್ಟ್ಯ ಹಾಗೂ ವೈಶಾಲ್ಯದ ಪ್ರಕಟಣೆಯಾಗಲು ಸಾಧ್ಯವಾಗುತ್ತದೆ. ಇದಲ್ಲದೆ ಈ ಪ್ರಯೋಗಗಳ ಕ್ಯಾಸೆಟ್‌ಗಳನ್ನು, ಸಿಡಿಗಳನ್ನು ಸಿದ್ಧಪಡಿಸಿ, ಜನರಿಗೆ ಲಭ್ಯಗೊಳಿಸಬೇಕೆಂಬ ವಿಚಾರವೂ ಇದೆ. ಈ ಕಾರ್ಯ ವೈಶಾಲ್ಯತೆಗೆ ಶಿಖರಪ್ರಾಯವಾಗುವಂತೆ “ಬೇಂದ್ರೆ ಸಂಗೀತ ಶಾಲೆ”ಯನ್ನು ಪ್ರಾರಂಭಿಸಿ, ತನ್ಮೂಲಕ ಸಂಗೀತ ಆಸಕ್ತ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ “ಬೇಂದ್ರೆ ಸಂಗೀತ”'ದಲ್ಲಿ ತರಬೇತಿ ನೀಡಿ, ವಿವಿಧ ಹಂತಗಳ ಸಂಗೀತ ಪರೀಕ್ಷೆಗಳನ್ನು ನಡೆಸಿ, ವಿಶಾರದ, ರತ್ನ ಮುಂತಾದ ಪ್ರಮಾಣ ಪತ್ರಗಳನ್ನು ನೀಡುವ ಯೋಜನೆಯೂ ಇದೆ. ವಿಶ್ವಕವಿ ಬೇಂದ್ರೆ “ಶಾಂತಿ ರಸವೇ ಪ್ರೀತಿಯಿಂದ ಮೈದೋರಿತಣ್ಣ, ಇದು ಬರೀ ಬೆಳಗಲ್ಲೋ ಅಣ್ಣ” ಎಂಬ ದರ್ಶನವನ್ನು ಕಂಡವರು. ಇಂಥ ಶಾಂತಿ-ಪ್ರೀತಿಯ ಬೆಳಗು ವಿಶ್ವದಲ್ಲಿ ಮೂಡಿದಾಗ ಅದು ಕೇವಲ ರವಿ ಕಿರಣದ ಬೆಳಗಾಗಿರದೆ, 'ಅನುಸೂಯಾ ತತ್ತ್ವ' ಆಧಾರಿತ (ಮಾವಿದ್ವಿಷಾವಹೈ) ಒಲವಿನ ಬದುಕಿನ ನವಮಾನವೀಯತೆಯ ಬೆಳಗು ಆಗುತ್ತದೆ ಎಂಬ ನಂಬಿಕೆ ಅವರದಾಗಿತ್ತು. “ದುಡಿಯುವ ಬಡವರು, ನಾಡಿನ ಒಡೆಯರು; ದುಡಿಯದ

ಒಡೆಯರು, ಕಾಣದ ಹಾದಿಯ ಹಿಡಿವರು'' ಎಂಬ ಹೊಸ ಸಮಾಜ ರಚನೆಯ ಕನಸನ್ನು ಕಂಡವರು ಅವರು. ತಾವು ತಮ್ಮ ತಾಯಿಯ ಹೆಸರಿನಲ್ಲಿ ಕವನ ರಚನೆಯಲ್ಲಿ ತೊಡಗಿದ ಬಗ್ಗೆ ಹೇಳುತ್ತಾ, ''ಸಾವಿರದ ಮನೆಗಳಲ್ಲಿ ನನಗೆ ಮನೆಯ ಮಾಡಿದೆ. ತಾಯಿ ಆಟ ಹೂಡಿದೆ, ನಿನ್ನ ಹೆಸರಿನಲ್ಲಿ ನಾನು ಬರೆವುದೇನು ಸೋಜಿಗ, ತಿಳಿಯಲಾರದೀ ಜಗ'' ಎಂದಿದ್ದಾರೆ. ನಿಜ, 'ಅಂಬಿಕಾತನಯದತ್ತ'ರಿಗೆ ಸಾವಿರದ (ಸಾವು+ಇರದ) ಮನೆಗಳಲ್ಲಿ ಅವರ ತಾಯಿ ಅಂಬಿಕೆ ಮನೆ ಮಾಡಿದ್ದಾಳೆ. ಅಂತೆಯೇ ನಾಡಿನ ಜನ ಸಾಗರದ ಪ್ರತಿಯೊಬ್ಬರ ನಾಲಿಗೆಯ ಮೇಲೆ ಅಂಬಿಕಾತಯನ ನುಡಿಗಳು ನಾಟ್ಯ ನಡೆಯಬೇಕು, ಅವು ಅವರ ಮನಮನದಲ್ಲಿ ಬೇರೂರಿ ನಾಟಬೇಕು, ಈ ನಿರಂತರ ಪ್ರಕ್ರಿಯೆ ನಡೆಯಬೇಕು, ಈ ಪ್ರಕ್ರಿಯೆಗೆ ಪೂರಕವಾಗುವಂತೆ ಪೋಷಕವಾಗುವಂತೆ ಮಾಡುವುದೇ ಬೇಂದ್ರೆ ಸಂಗೀತ ಅಕ್ಯಾಡೆಮಿಯ ಮಹದೋದ್ದೇಶ. ಈ ಮಹದೋದ್ದೇಶದ ಸಫಲತೆಗಾಗಿ ನಾಡಿಗರೆಲ್ಲರೂ ಒಂದಾಗಿ, ಮುಂದಾಗಿ ಕಾರ್ಯೋನ್ಮುಖವಾಗಬೇಕಾಗುತ್ತದೆ. ನಮ್ಮ ಅಕಾಡೆಮಿಯ ಕಾರ್ಯಕ್ಕೆ ಸಹಾಯ-ಸಹಕಾರ ನೀಡಬೇಕೆಂದು ಕೋರುತ್ತೇವೆ.

ಬೇಂದ್ರೆ ಸಂಗೀತ ಅಕ್ಯಾಡೆಮಿ ರಚನೆ ಆಗುವ ಪೂರ್ವದಲ್ಲಿಯ ಇತಿಹಾಸದ ಕಲ್ಪನೆ ಬೇಂದ್ರೆ ಸಂಗೀತಕ್ಕೆ ಈ ಹೊಸ ಆಯಾಮುಗಳನ್ನು ನೀಡಿರುವುದಕ್ಕೆ ಸಮರ್ಥನೆಯನ್ನು ಒದಗಿಸುತ್ತದೆ. ದ. ರಾ. ಬೇಂದ್ರೆಯವರು ಸಂಗೀತದ ಅಂತರಾಳವನ್ನು ಅರಿತವರು, ಅವರು ತಮ್ಮ ಕಾವ್ಯಗಳನ್ನು ವಾಚನ ಮಾಡಿದಾಗ ಶ್ರೋತೃಗಳಲ್ಲಿ ಕಾವ್ಯದ ಅಂತಃದರ್ಶನದ ವಿದ್ಯುತ್ ಸಂಚಲನವಾಗುತ್ತಿತ್ತು. ಶ್ರೋತೃವೃಂದ ಆನಂದದಿಂದ ಮಿಂಚುತ್ತಿತ್ತು. ಆದರೂ ಬೇಂದ್ರೆಯವರು ತಮ್ಮ ಕಾವ್ಯವನ್ನು ಸಂಗೀತಕ್ಕೆ ಅಳವಡಿಸಲು ಬಯಸಿದ ಸಂಗೀತ ತಜ್ಞರಿಗೆ ತಮ್ಮದೇ ಆದ ರೀತಿಯಲ್ಲಿ ವಿಶೇಷ ಅಂತಃದೃಷ್ಟಿಯನ್ನು ನೀಡುತ್ತಿದ್ದರು. ಆ ರೀತಿ ಬೇಂದ್ರೆಯವರ ಸಂಗೀತದ ಗರಡಿಯಲ್ಲಿ ತಯಾರಾದವರಲ್ಲಿ ವಿಶೇಷವಾಗಿ ಶ್ರೀ ಪಿ. ಆರ್. ಭಾಗವತ್ ಅವರನ್ನು ಹೆಸರಿಸಲೇ ಬೇಕು. ಅಂತೆಯೇ ಜಾನಪದ ಜಗತ್ತಿನ ಸಾಮ್ರಾಟರಾಗಿ ಹೆಸರುವಾಸಿಯಾದ ಶ್ರೀ ಹುಕ್ಕೇರಿ ಬಾಳಪ್ಪ ಇವರ ಸಲುವಾಗಿಯೇ ಬೇಂದ್ರೆಯವರು ಕೆಲ ಜಾನಪದ ಧಾಟಿಯ ಕವನಗಳನ್ನು ರಚಿಸಿ ಕೊಟ್ಟಿದ್ದರು. ಅವರ ಮಹಾಭಿಲಾಷೆ ಹಿಂದೂಸ್ತಾನಿ ಸಂಗೀತಕ್ಕಾಗಿ ಕನ್ನಡದಲ್ಲಿ ಚೀಜುಗಳನ್ನು ತಯಾರಿಸಿ ಅದನ್ನೇ ಕನ್ನಡಿಗರಾದ ಹಿಂದೂಸ್ತಾನಿ ಸಂಗೀತ ತಜ್ಞರು ಹಾಡಬೇಕು ಎಂಬುದಾಗಿತ್ತು. ವಿಶ್ವಖ್ಯಾತಿ ಹೊಂದಿದ ಹಿಂದೂಸ್ತಾನಿ ಸಂಗೀತ ಶಾಸ್ತ್ರಜ್ಞ ಪಂಡಿತ ಭೀಮಸೇನ ಜೋಷಿ ಇವರ ಸಲುವಾಗಿಯೇ ಒಂದು ವಿಶೇಷ ಕವನವನ್ನು ಬೇಂದ್ರೆ ರಚಿಸಿಕೊಟ್ಟಿದ್ದರು ಎಂಬುದು ಮಹತ್ವದ ವಿಷಯ. ಈ ಎಲ್ಲ ಹಿನ್ನೆಲೆಯಲ್ಲಿ ''ಬೇಂದ್ರೆ ಸಂಗೀತ ಅಕ್ಯಾಡೆಮಿ'' ಜನಿಸಿರುವುದು. ತಮ್ಮ ಕಾವ್ಯ ಜನಮನವನ್ನು ಹೇಗೆ ಮುಟ್ಟಬೇಕು ಎಂದು ಬೇಂದ್ರೆಯವರು ಭಾವಿಸಿದ್ದರೋ ಆ ರೀತಿಯಾಗಿ ಅವುಗಳನ್ನು ಮುಟ್ಟಿಸುವ ಕಾರ್ಯದಲ್ಲಿ ಸಫಲವಾದರೆ ಈ ಅಕ್ಯಾಡೆಮಿಗೆ ಅತೀವ ಸಂತಸ ಹಾಗೂ ಸಂತೃಪ್ತಿ ಲಭಿಸೀತು.

ಇನ್ನು ಪ್ರಚಲಿತ ಕೃತಿಯನ್ನು ಕುರಿತು ಒಂದೆರಡು ಮಾತು. ''ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು'' - ಒಂದು ವಿಶಿಷ್ಟ ಕೃತಿ. ಬೇಂದ್ರೆಯವರು ಶ್ರೀಮಾತಾರವಿಂದರನ್ನು ಗುರು ಸ್ಥಾನದಲ್ಲಿ ಹೊಂದಿ, ಅವರಿಂದ ತಮ್ಮ ಕಾವ್ಯೋದ್ಯೋಗ

(ಕಾವ್ಯ+ಉತ್+ಯೋಗ)ಕ್ಕೆ ಸ್ಫೂರ್ತಿಯನ್ನು ಪಡೆದವರು. ಈ ಕೃತಿಯ ವಾಸ್ತು ಹೀಗಿದೆ. ಮೊದಲ ಕವನವು "ಸ್ವಾತಂತ್ರದೇವಿಗೆ" - ಭಾರತಹುಣ್ಣಿವೆಗೆ ಸಂಬಂಧಿಸಿದ್ದು. ಶ್ರೀ ಅರವಿಂದರು ಹುಟ್ಟಿದ್ದು ೧೫ನೇ ಆಗಸ್ಟ್; ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ್ದೂ ಕೂಡ ೧೫ನೇ ಆಗಸ್ಟ್, ಈ ಸಂಧಿಸುವಿಕೆಗೆ ಅನುಗುಣವಾಗಿ "ಸ್ವಾತಂತ್ರ್ಯದ ಹುಟ್ಟು ಹಬ್ಬ" ಕವನದಿಂದ ಈ ಸಂಕಲನ ಪ್ರಾರಂಭವಾಗುತ್ತದೆ. ಇನ್ನು ಕೊನೆಯ ಕವನ "ಸರ್ವ ಮಂಗಲ" - ಸರ್ವರಿಗೂ ಮಂಗಳವಾಗಲಿ ಎಂದು ವಿಶ್ವದ ಜನತೆಗೆ ಬೇಂದ್ರೆ ಹಾರೈಸಿದ್ದಾರೆ. ಈ ಎರಡು ಕವನಗಳ ಮಧ್ಯೆ ಇರುವುದು ೧೫ ಕವನಗಳು. ಅದರಲ್ಲಿ ಎರಡು ಭಾಗ. "ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತೆ' ಎಂಬ ಮೊದಲನೆಯ ಭಾಗದಲ್ಲಿ ಶ್ರೀಮಾತೆಯವರನ್ನು ಕುರಿತು ಏಳು ಕವನಗಳು. ಹಾಗೂ "ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀ ಅರವಿಂದರು" ಎಂಬ ಎರಡನೆಯ ಭಾಗದಲ್ಲಿ ಶ್ರೀ ಅರವಿಂದರನ್ನು ಕುರಿತು ಎಂಟು ಕವನಗಳು. ಹೀಗೆ ಒಟ್ಟು ಶ್ರೀಮಾತೆ ಹಾಗೂ ಶ್ರೀ ಅರವಿಂದರನ್ನು ಕುರಿತು ಒಟ್ಟು ೧೫ ಕವನಗಳನ್ನು ಸೇರ್ಪಡೆ ಮಾಡಲಾಗಿದೆ. ಈ ಎಲ್ಲ ಕವನಗಳಿಗೆ ಸಂಗೀತ ಸಂಯೋಜನೆ ಮಾಡಲಾಗಿದೆ. ಹೀಗಾಗಿ ಈ ಕವನ ಸಂಕಲನದಲ್ಲಿ ಒಟ್ಟು ೧೭ ಕವನಗಳಿಗೆ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಮೇರೆಗೆ ಸ್ವರ ಸಂಯೋಜನೆಯನ್ನು ಒದಗಿಸಲಾಗಿದೆ.

ಬೇಂದ್ರೆ ಸಂಗೀತ ಅಕ್ಯಾಡೆಮಿಯ ಸಂಗೀತ ಸಂಯೋಜಕರಾದ ಪಂಡಿತ ಶ್ರೀ ಕೃಷ್ಣಾಜಿ ಕುರ್ತುಕೋಟಿಯವರು ಎಲ್ಲ ಕವನಗಳಿಗೂ ಸಂಗೀತ ಸಂಯೋಜನೆಯನ್ನು ರಚಿಸಿದ್ದಾರೆ. ಇದು ಸಂಗೀತ ಶಾಸ್ತ್ರ ಸಾಹಿತ್ಯಕ್ಕೆ ಅತ್ಯಂತ ಅಮೂಲ್ಯವಾದ ಕಾಣಿಕೆ ಎಂದೇ ಹೇಳಬೇಕು. ಈಗಾಗಲೇ ಇವರು ಈ ಹಿಂದೆ ಪ್ರಕಟಪಡಿಸಿರುವ ಐದು ಸಂಗೀತ ಕುಸುಮಗಳಿಗೂ ಸಂಗೀತ ಸಂಯೋಜನೆಯನ್ನು ಮಾಡಿದ್ದಾರೆ. ಇದಲ್ಲದೆ ಪ್ರತಿ ಭಾರತ ಹುಣ್ಣಿಮೆಯ ರಾತ್ರಿ ನಡೆಯುತ್ತಾ ಬಂದಿರುವ "ಬೇಂದ್ರೆ ಸಂಗೀತ ರಾತ್ರಿ"ಯಲ್ಲಿ ತಾವು ಬೇಂದ್ರೆ ಸಂಗೀತಕ್ಕೆ ಹಿಂದೂಸ್ತಾನಿ ಶಾಸ್ತ್ರೀಯ ಮೆರಗನ್ನು ಒದಗಿಸುವಂತೆ ಹಾಡಿದ್ದಾರೆ, ಹಾಗೂ ತಮ್ಮ ಶಿಷ್ಯ ಬಳಗದಿಂದ ಹಾಡಿಸಿದ್ದಾರೆ. ಬೆಂಗಳೂರಿನಲ್ಲಿ "ಅರವಿಂದಾಶ್ರಮ"ದಲ್ಲಿ "ಬೇಂದ್ರೆ ಕಂಡ ಶ್ರೀಮಾತಾರವಿಂದರು" ಶೀರ್ಷಿಕೆಯ ಬೇಂದ್ರೆ ಸಂಗೀತ ಕಾರ್ಯಕ್ರಮವನ್ನು ನಿರ್ದೇಶಿಸಿದರು (೨೨-೧-೨೦೦೫). ಅಂತೆಯೇ ರಾಣೆಬೆನ್ನೂರಿನಲ್ಲಿ ನಾಡ ಹಬ್ಬದ ಅಂಗವಾಗಿ ಎರಡು ವರುಷಗಳ ಕಾಲ ನಿರಂತರವಾಗಿ "ಬೇಂದ್ರೆ ಸಂಗೀತ" ಕಾರ್ಯಕ್ರಮವನ್ನು ನಿರ್ದೇಶಿಸಿದ್ದಾರೆ. ಬೇಂದ್ರೆ ಸಂಗೀತ ಅಕ್ಯಾಡೆಮಿಯ ಆಶ್ರಯದಲ್ಲಿ ನಡೆದ ಈ ಕಾರ್ಯಕ್ರಮಗಳು "ಬೇಂದ್ರೆ ಸಂಗೀತ" ಹೆಚ್ಚು ಹೆಚ್ಚಾಗಿ ಜನಪ್ರಿಯವಾಗುತ್ತಿರುವ ಸೂಚನೆಗಳು. ಬೇಂದ್ರೆ ಭಾವಗೀತೆಗಳು ಅತ್ಯಂತ ಜನಪ್ರಿಯ, ನಿಜ. ಇತ್ತೀಚೆ ಬೇಂದ್ರೆ ಅಭಿಮಾನಿಗಳಾದ ಶ್ರೀಮತಿ ರಾಧಿಕಾ ಕಾಖಂಡಿಕಿಯವರು ಶ್ರೀ ಹ. ವೆಂ. ಕಾಖಂಡಿಕಿಯವರ ಸಹಕಾರದಿಂದ "ನಾದಬೇಕು" ಎಂಬ ಬೇಂದ್ರೆ ಸಂಗೀತದ ಕ್ಯಾಸೆಟ್ ಹಾಗೂ ಸಿ.ಡಿ.ಯನ್ನು ಉತ್ಪಾದಿಸಿದ್ದಾರೆ. ಅಂತೆಯೇ "ಬೇಂದ್ರೆ ಸಂಗೀತ" ಒಂದು "ಬೇಂದ್ರೆ ಘರಾನೆ"ಯಾಗಿ ರೂಪತಾಳಲಿ ಎನ್ನುವುದು ನಮ್ಮ ಅಭಿಲಾಷೆಯಾಗಿದೆ.

ಇನ್ನೊಂದು ಅಭಿಮಾನದ ವಿಷಯವೆಂದರೆ ಬೇಂದ್ರೆ ಸಂಗೀತ ಅಕ್ಯಾಡೆಮಿಯು ಗುಲಬರ್ಗಾ

ದೂರದರ್ಶನದ ಸಹಯೋಗದೊಂದಿಗೆ ''ಬೇಂದ್ರೆ ಸಂಗೀತ''ದ ನಾಂದಿ ಮಹೋತ್ಸವವನ್ನು ''ಬೇಂದ್ರೆ ಕುಟೀರ''ದಲ್ಲಿ ಆಯ್ದ ಶ್ರೋತೃಗಳ ಸಮ್ಮುಖದಲ್ಲಿ ಏರ್ಪಡಿಸಿದ್ದು. ಈ ಕಾರ್ಯಕ್ರಮದಲ್ಲಿ ಬೇಂದ್ರೆ ಸಂಗೀತ ಅಕ್ಯಾಡೆಮಿಯ ಪರವಾಗಿ ಪಂಡಿತ ಕೃಷ್ಣಾಜಿ ಕುರ್ತುಕೋಟಿ ಹಾಗೂ ಇವರ ಶಿಷ್ಯವೃಂದ, ಅಲ್ಲದೆ ಸುಪ್ರಸಿದ್ಧ ಸಂಗೀತ ಕಲಾವಿದರಾದ ಕೈವಲ್ಯಕುಮಾರ ಗುರವ, ಸಂಗೀತಾ ಕಟ್ಟಿ ಕುಮಾರ ಮರಡುರ, ಅಶೋಕ ನಾಡಗೀರ್, ಗಾಯತ್ರಿ ದೇಶಪಾಂಡೆ ಮುಂತಾದವರು ಬೇಂದ್ರೆ ನಾಟ್ಯಗೀತೆ, ಬೇಂದ್ರೆ ಭಾವ ಗೀತೆ, ಬೇಂದ್ರೆ ಅಭಂಗ, ಬೇಂದ್ರೆ ಜಾನಪದ ಗೀತೆ, ಬೇಂದ್ರೆ ಶಾಸ್ತ್ರೀಯ ಸಂಗೀತ ಈ ಎಲ್ಲ ಪ್ರಕಾರಗಳಲ್ಲಿ ಬೇಂದ್ರೆ ಸಂಗೀತ ಲೋಕದ ವಿರಾಟ್ ದರ್ಶನವನ್ನು ಒದಗಿಸಿ, ನೇತ್ರಾನಂದ-ಕರ್ಣಾನಂದ- ಹೃದಯಾನಂದಗಳನ್ನು ಒದಗಿಸಿದರು. ಈ ಕಾರ್ಯಕ್ರಮವು ಗುಲಬರ್ಗ ದೂರದರ್ಶನವು ಅರ್ಧ ಗಂಟೆಯ ಎರಡು ಕಾರ್ಯಕ್ರಮಗಳಾಗಿ ಪ್ರಸಾರ ಮಾಡಿದ್ದಕ್ಕೆ ಬೇಂದ್ರೆ ಸಂಗೀತ ಅಕ್ಯಾಡೆಮಿ ಇವರಿಗೆ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತದೆ. ಇದು ''ಬೇಂದ್ರೆ ಸಂಗೀತ''ದ ಮಹತ್ವದ ರಾಷ್ಟ್ರೀಯ ಪ್ರಸಾರವೆಂದೇ ಹೇಳಬೇಕು. ಗುಲಬರ್ಗ ದೂರದರ್ಶನದ ಕಾರ್ಯನಿರ್ವಾಹಕ ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗಕ್ಕೆ ನಾವು ಕೃತಜ್ಞರು.

ವರಕವಿ ದ. ರಾ. ಬೇಂದ್ರೆಯವರ ಸುಪುತ್ರರೂ, ಬೇಂದ್ರೆ ಸಂಗೀತ ಅಕ್ಯಾಡೆಮಿಯ ಸಹ ನಿರ್ದೇಶಕರೂ ಆದ ಡಾ|| ವಾಮನ ಬೇಂದ್ರೆಯವರು 'ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀ ಮಾತಾರವಿಂದರು'' ಕೃತಿಯನ್ನು ಅಚ್ಚುಕಟ್ಟಾಗಿ ಸಂಪಾದಿಸಿದ್ದಾರೆ, ಇದಕ್ಕೆ ಸಂಶೋಧನಾಯುಕ್ತವಾದ ''ಭೂಮಿಕೆ''ಯನ್ನು ಹಾಗೂ ಇಲ್ಲಿಯ ಕವನಗಳಿಗೆ ವಿವರಗಳನ್ನು ರಚಿಸಿದ್ದಾರೆ. ಅವರಿಗೆ ಅಕ್ಯಾಡೆಮಿಯು ತನ್ನ ಅಭಿನಂದನೆಗಳನ್ನು ಸಲ್ಲಿಸುತ್ತದೆ. ಈ ಕೃತಿಯ ಡಿ.ಟಿ.ಪಿ.ಯನ್ನು ಮಿಂಚಿನ ವೇಗದಲ್ಲಿ ಸಿದ್ಧಮಾಡಿದ ಕೆ. ಎಸ್. ಶರ್ಮಾ ಕೈ ತ. ಸಂಸ್ಥೆಯ ಡಿಟಿಪಿ ವಿಭಾಗದ ಮುಖ್ಯಸ್ಥರಾದ ಶ್ರೀ ಈರಣ್ಣ ನೂಲ್ವಿ ಯವರಿಗೆ, ಈ ಕೃತಿಯಲ್ಲಿಯ ಕವನಗಳಿಗೆ ಸರಿಹೊಂದುವಂತ ರೇಖಾ ಚಿತ್ರವನ್ನು ರಚಿಸಿದ ಬೇಂದ್ರೆ ಅಭಿಮಾನಿ ಸುಪ್ರಸಿದ್ಧ ಕಲಾವಿದ ಶ್ರೀ ಸುರೇಶ ಕುಲಕರ್ಣಿಯವರಿಗೆ, ಈ ಕೃತಿಯ ಮುದ್ರಣ ಕಾರ್ಯವನ್ನು ಅಷ್ಟೇ ಶೀಘ್ರಗತಿಯಲ್ಲಿ ಸುಂದರವಾಗಿ ನಿರ್ವಹಿಸಿದ ಶರ್ಮಾ ಮುದ್ರಣಾಲಯದ ಶ್ರೀ ಶಾಂತಕುಮಾರ್ ಹಾಗೂ ಸಹಕರಿಸಿದ ಶ್ರೀ ಬ್ಯಾಡಗಿಯವರಿಗೆ ಅಭಿನಂದನೆ. ಈ ಕೃತಿ ಉತ್ಪಾದನೆಯಲ್ಲಿ ಸಹಕರಿಸಿದ ಶ್ರೀ ರವಿಂದ್ರ ಶಿರೋಳ್‌ಕರ್ ರವರಿಗೆ ಅಭಿನಂದನೆ.

ಈಗ ಈ ಕೃತಿ ರಸಿಕರಿಗಾಗಿ ಮುಕ್ತವಿಡಲಾಗಿದೆ. ನಿಮ್ಮ ಬೆಂಬಲ ನಮಗೆ ಬೆಂಗಾವಲು. ನೀವು ತುಂಬು ಹೃದಯದಿಂದ ಇದನ್ನು ಸ್ವಾಗತಿಸುವಿರೆಂದು ಅಕ್ಯಾಡೆಮಿ ನಂಬಿದೆ.

ತಮ್ಮ ವಿಶ್ವಾಸಿ,

(ಡಾ|| ಕೆ. ಎಸ್. ಶರ್ಮಾ)
ನಿರ್ದೇಶಕರು
ವರಕವಿ ಡಾ|| ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಸಂಗೀತ ಅಕಾಡಮಿ.

ಬೇಂದ್ರೆ ಕುಟೀರ, ಹುಬ್ಬಳ್ಳಿ
೨೫-೨-೨೦೦೫
ವರಕವಿ ದ. ರಾ. ಬೇಂದ್ರೆ ೧೧೯ನೇ ವಾರ್ಷಿಕ ಜನ್ಮದಿನ.

# ಸಂಪಾದಕರ ಭೂಮಿಕೆ

ಬೇಂದ್ರೆಯವರಿಗೆ ಜೀವನ ಮತ್ತು ಸಾಹಿತ್ಯ ಭಿನ್ನ ಪ್ರವಾಹಗಳಲ್ಲ. ಜೀವನವನ್ನು ಅರಳಿಸಿಕೊಂಡರೆ ಸಾಹಿತ್ಯ ಶಕ್ತಿ ಪ್ರಕಟವಾಗುತ್ತದೆ ಎಂಬುದು ಅವರ ಜೀವನ ಶ್ರದ್ಧೆಯಾಗಿತ್ತು. ಅವರು ದತ್ತಾತ್ರೇಯ ರಾಮಚಂದ್ರ ಬೇಂದ್ರೆಯಾಗಿ ಹುಟ್ಟುವ ಮೊದಲಿನ, ಪೂರ್ವಜನ್ಮದಲ್ಲಿ ದತ್ತ ಭಕ್ತರಾಗಿದ್ದರು. ಅವರಿಗೆ ಹುಟ್ಟಾ ಒಂದು ದತ್ತ ಮಂತ್ರ ಬರುತ್ತಲೇ ಇತ್ತು. ಈ ಮಂತ್ರ ಅವರಿಗೆ ಯಾವ ಗ್ರಂಥದಲ್ಲೂ ಸಿಕ್ಕಿರಲಿಲ್ಲ. ಅದು ಅವರ ಪೂರ್ವ ಜನ್ಮದ ಗುರು ಈ ಜನ್ಮದ ಸೊಲ್ಲಾಪುರದ ಸದ್ಗುರು ಪ್ರಭಾಕರ ಸ್ವಾಮಿ ಟೇಂಬೆಯವರು ಕೊಟ್ಟದ್ದು ಎಂಬುದು ಅವರಿಗೆ ೫೩ನೆಯ ವಯಸ್ಸಿಗೆ ತಿಳಿಯಿತು. ಆದರೆ ಬಾಲ್ಯದಲ್ಲಿ ತಾಯಿ ಅಂಬಿಕೆಯೊಂದಿಗೆ ಧಾರವಾಡದ ದತ್ತಾತ್ರೇಯ ಗುಡಿಯ ಎದುರಿಗಿದ್ದ ಹಾಲಗೇರಿ ಎಂಬ ಕೆರೆಯಲ್ಲಿ ಹರಿದು ಹೋಗುವಾಗ ಅಲ್ಲಿಯ ದತ್ತ ಶಕ್ತಿ ಪ್ರವೇಶಗೊಂಡದ್ದನ್ನು ಬೇಂದ್ರೆಯವರು ''ತುಂಬಿತ್ತು ಹಾಲಗೇರಿ'' ಎಂಬ ಕವನದಲ್ಲಿ ವರ್ಣಿಸಿದ್ದಾರೆ. ಇದರ ಫಲವಾಗಿ ಬೇಂದ್ರೆಯವರಿಗೆ ಚಿದಂಬರ ಜ್ಯೋತಿಯ ದರ್ಶನವಾಯಿತು. ಇದೇ ಮಾರ್ಗದರ್ಶಕವಾಗಿ ಬೇಂದ್ರೆಯವರ ಶ್ರೀ ಅರವಿಂದ ಸಾಹಿತ್ಯ ಓದುವಿಕೆ ೧೯೧೪ ರಿಂದ 'ಆರ್ಯ' ಮಾಸ ಪತ್ರಿಕೆಗಳಲ್ಲಿಯ ಲೇಖನಗಳ ವಾಚನದಿಂದಲೇ ಪ್ರಾರಂಭವಾಯಿತು.

''ಮಾನವನ ಹೃದಯ'' ಬುದ್ಧಿ ಮತ್ತು ಕೃತಿ ಇವುಗಳೆಲ್ಲವೂ ಸಂಪೂರ್ಣವಾಗಿ ಮಾರ್ಪಡಬೇಕು. ಆದರೆ ಹೊರಗಿನಿಂದಲ್ಲ, ಒಳಗಿನಿಂದಲೇ ಬದಲಾಗಬೇಕು. ರಾಜಕೀಯ ಅಥವಾ ಸಾಮಾಜಿಕ ಸತ್ರಗಳಿಂದಲ್ಲ. ಅಷ್ಟೇ ಏಕೆ ಧರ್ಮ ಶ್ರದ್ಧೆ ಮತ್ತು ತತ್ತ್ವ ವಿಚಾರಗಳಿಂದಲೂ ಸಹ ಅಲ್ಲ. ಆದರೆ ನಮ್ಮೊಳಗಿನ ಹಾಗೂ ಜಗತ್ತಿನೊಳಗಿನ ದೇವನನ್ನು ಸ್ವಾನುಭವಿಸಿ, ಆ ಅನುಭವ ಮೂಲಕವಾಗಿ ಜೀವನವನ್ನು ತಿರುಗಿ ಎರಕ ಹೊಯ್ಯುವುದರಿಂದ ಪೂರ್ಣಯೋಗದ ಸಾಧನೆಯಿಂದ ಮಾತ್ರ ಫಲಿಸಬಲ್ಲದು'' ಎಂಬ ಸಿದ್ಧಾಂತ ೧೮ ವರ್ಷದ ಎಳೆಯ ಬೇಂದ್ರೆಯವರ ಹೃದಯದಲ್ಲಿ ಬೇರು ಪಡೆಯಿತು.

ಬೇಂದ್ರೆಯವರು ೧೯೧೪ ರಿಂದ ಶ್ರೀ ಅರವಿಂದರು ಪ್ರಕಟಿಸಿದ 'ಆರ್ಯ' ಪತ್ರಿಕೆಯೊಳಗಿನ ಲೇಖನಗಳನ್ನು ಓದುತ್ತ ಬಿ. ಎ. ಪದವಿ ಪಡೆದವರು. ೧೯೧೮ ರಿಂದ ತಮ್ಮ ತಾಯಿ, ಪತ್ನಿ ಎಳೆಯ ಗೆಳೆಯನಿಗೆ ಶ್ರೀ ಅರವಿಂದರ ಪೂರ್ಣಯೋಗದ ಮಹತ್ತ್ವವನ್ನು ಅತ್ಯಂತ ಸರಳವಾಗಿ

ಸುಲಭ ಮಾಡಿ ಕನ್ನಡದಲ್ಲಿ ಹೇಳುತ್ತಿದ್ದರು. ಶ್ರೋತೃಗಳು ಆನಂದ ಪಡುವುದನ್ನು ನೋಡಿ ಬೇಂದ್ರೆಯವರ ಶ್ರೀ ಅರವಿಂದ ಶ್ರದ್ಧೆ ಬೆಳೆಯುತ್ತ ಹೋಯಿತು. ೧೯೨೨ ರಿಂದ ಪ್ರತಿ ದಿವಸ ಶ್ರೀ ಅರವಿಂದ ಹಾಗೂ ಶ್ರೀಮಾತೆಯವರಿಗೆ ತಮ್ಮ ಪ್ರತಿ ದಿನದ ಆಗುಹೋಗುಗಳ ನಿವೇದನೆ ಮಾಡಿ, ಪ್ರಾರ್ಥನೆಗಳನ್ನು ಬರೆದು ಅರ್ಪಿಸುವ ಪರಿಪಾಠ ಬೆಳೆಸಿಕೊಂಡರು. ೧೯೨೬ ರಿಂದ 'ಸ್ವಧರ್ಮ', 'ಜಯ ಕರ್ನಾಟಕ', 'ವಿಜಯ', 'ಸಮರ್ಪಣ' ಮತ್ತು 'ದೀಪ್ತಿ'ಯಲ್ಲಿ ಶ್ರೀ ಅರವಿಂದರ ಪೂರ್ಣಯೋಗ ಹಾಗೂ ಶ್ರೀ ಅರವಿಂದ ವಾಙ್ಮಯ ಕುರಿತು ಲೇಖನಗಳನ್ನು ಪ್ರಕಟಿಸುತ್ತ ಬಂದರು.

ಬೇಂದ್ರೆಯವರಿಗೆ ಅವರ ಜೀವನದ ಪ್ರತಿಕ್ಷಣದಲ್ಲಿ ಸದ್ಗುರು ಶ್ರೀ ಅರವಿಂದ ಹಾಗೂ ಶ್ರೀ ಮಾತೆಯವರ ಕೃಪಾಪ್ರಸಾದದ ಅನುಭವ ಬರತೊಡಗಿತು. ೧೯೫೦ ರಲ್ಲಿ ಪತ್ನಿ ಲಕ್ಷ್ಮೀಬಾಯಿ ವಿಷಮ ಜ್ವರದ ಮೂಲಕ ಮರಣದ ಬಾಗಿಲ ತಲುಪಿದ್ದರು. ಅವರಿಗೆ ಯಮದೂತರು ಕಾಣುತ್ತಿದ್ದರು. 'ಆ ಯಮದೂತರನ್ನು ಪಾಂಡಿಚೇರಿಯ ಶ್ರೀ ಅರವಿಂದರ ಕಡೆಗೆ ಹೋಗಿ ಅನುಮತಿ ಪಡೆದು ಒಯ್ಯಬಹುದು' ಎಂದು ಹೇಳಲು ಬೇಂದ್ರೆ ಹೇಳಿದರು. ಲಕ್ಷ್ಮೀಬಾಯಿ ಹಾಗೆ ಹೇಳಿದರು. ಅವರಿಗೆ ನಿದ್ದೆ ಹತ್ತಿತ್ತು. ನಿದ್ರೆಯಲ್ಲಿ ಕನಸು ಕಂಡರು - ಶ್ರೀ ಅರವಿಂದರು ಲಕ್ಷ್ಮೀಬಾಯಿಯವರ ಮರಣಕ್ಕೆ ಒಪ್ಪಿಗೆ ಕೊಡಲಿಲ್ಲ. ಇದರ ಮೂಲಕ ಸಿಟ್ಟಿಗೆದ್ದ ಯಮದೂತರು ಲಕ್ಷ್ಮೀಬಾಯಿಯವರ ಕಾಲುಗಳನ್ನು ಕಡೆದುಕೊಂಡು ಹೋದರು. ಈ ಕನಸಿನ ಫಲವಾಗಿ ೮ ದಿವಸಗಳಲ್ಲಿ ಕಾಲುಗಳಿಗೆ ಇಸಬು ರೋಗವಾಯಿತು. ಆದರೆ ಮುಂದೆ ೧೬ ವರ್ಷ ೧೯೬೬ರ ವರೆಗೆ ಲಕ್ಷ್ಮೀಬಾಯಿ ಬೇಂದ್ರೆಯವರೊಂದಿಗೆ ಬಾಳಿದರು. ಇದು ಬೇಂದ್ರೆ, ಜೀವನದಲ್ಲಿ ಅನುಭವಿಸಿದ ಶ್ರೀ ಗುರು ಅರವಿಂದ ಹಾಗೂ ಶ್ರೀಮಾತೆಯವರ ಮಹಾ ಕೃಪಾ ಪ್ರಸಾದ. ಈ ಘಟನೆಯ ಮೂಲಕ ಬೇಂದ್ರೆಯವರ ಶ್ರದ್ಧೆ ನಿಷ್ಠೆ ಆಯಿತು. ಅದೇ ಬೆಳಕಿನಲ್ಲಿ - ೯ ಮಕ್ಕಳಲ್ಲಿ ಬದುಕಿ, ಉಳಿದು ಬಾಳಿದ - ಪಾಂಡುರಂಗ, ವಾಮನ, ಮಂಗಲಾ - ಇವರನ್ನು ಬೇಂದ್ರೆ ಬೆಳೆಸಿದರು. ಇದು ನಮ್ಮ ಭಾಗ್ಯ.

ಪ್ರತಿ ದಿವಸ ರಾತ್ರಿ ಶ್ರೀ ಅರವಿಂದ ಶ್ರೀಮಾತಾ ವಾಙ್ಮಯ ಪಠನ ಸಾಮೂಹಿಕವಾಗಿ ಮಾಡುತ್ತಿದ್ದೆವು. ರಾಮಣ್ಣಾ ಗುಮಾಸ್ತೆ ಸಹಿತ ಧ್ಯಾನದಲ್ಲಿ ಭಾಗವಹಿಸುತ್ತಿದ್ದರು. ಬೇಂದ್ರೆಯವರು ಶ್ರೀ ಅರವಿಂದ ಪ್ರಣೀತ ''ಓಂ'' ಕಾರ ಉಪಾಸನೆ, ಅನ್ನ, ಪ್ರಾಣ, ಮನ, ವಿಜ್ಞಾನ, ಸತ್, ಚಿತ್, ಆನಂದ ಸಪ್ತ ಕೋಶಗಳ ವಿಚಾರ. ಅಭೀಪ್ಸೆ ಹಾಗೂ ಅವತರಣಗಳ ಸಾಧನಾ ಕ್ರಮ, ಮನ, ಬುದ್ಧಿ, ಭಾವ, ಧ್ಯಾನದಲ್ಲಿ ತೊಡಗಿಸುವ ಪೂರ್ಣಯೋಗದ ರೀತಿ ವಿವರಿಸುತ್ತಿದ್ದರು. ಸರ್ವ ಸಮರ್ಪಣೆಯಿಂದಲೇ ದಿವ್ಯ ಜೀವನ ಅನುಭವಿಸಲು ಸಾಧ್ಯ ಎಂದು ನುಡಿಯುತ್ತಿದ್ದರು. ಪತ್ನಿ ಮಕ್ಕಳಾದ ನಾವು ಹಾಗೂ ಜೀವನದ ಯಾವುದೇ ಪ್ರಸಂಗದಲ್ಲಿ ಬೇಂದ್ರೆ, ನಿರ್ಣಯ ತೆಗೆದುಕೊಳ್ಳುತ್ತಿರಲಿಲ್ಲ. ಶ್ರೀಮಾತಾರವಿಂದರ ಪಾದಗಳಲ್ಲಿ ನಿವೇದನೆ ಮಾಡುತ್ತಿದ್ದರು. ನಿರ್ಣಯ ಗುರುದ್ವಯರದೇ. ಇದು ಬೇಂದ್ರೆ ಜೀವನದ ನಡೆ. ಅವರ ನುಡಿ ಹಾಗೂ ನಡೆ ನನ್ನ ಮೇಲೆ ಕೃಪೆ ಮಾಡಿತು. ತಂದೆ, ತಾಯಿ ಮತ್ತು ನಾನು ೨೪-೪-೧೯೪೭ರಂದು ದರ್ಶನ ಪಡೆದೆವು. ಆ ದೃಕ್ ದರ್ಶನ ದೀಕ್ಷೆ ನನ್ನ ಜೀವನದ ಮಾರ್ಗದರ್ಶಕ ಜ್ಯೋತಿ.

ಬೇಂದ್ರೆಯವರ ಜೀವನ ಮತ್ತು ಸಾಹಿತ್ಯ - ಔದುಂಬರಗಾಥೆ. ಜೀವನ ಮಹಾಕಾವ್ಯ ಶಿಖರ ತಲಪುವಲ್ಲಿ ಸದ್ಗುರು ಶ್ರೀ ಅರವಿಂದ ಹಾಗೂ ಶ್ರೀಮಾತೆಯವರ ಕೃಪೆ ಮಹತ್ತ್ವದ ಕಾರ್ಯ ಮಾಡಿದೆ. ಅದರ ಹಂತಗಳ ನಿವೇದನೆ ಈ ಪ್ರಬಂಧದ ಉದ್ದೇಶ ಜೀವನ ಸಾರ್ಥಕವಾಗುವುದು ಆತ್ಮ ಸಾಕ್ಷಾತ್ಕಾರವೆಂಬ ಸಂಪೂರ್ಣ ಪರಿವರ್ತನೆಯ ಮೂಲಕ. ಇದರ ಫಲವಾಗಿ ಸ್ವಂತ ಜೀವನ ಒಂದು ಮಹಾಕಾವ್ಯದ ದರ್ಶನ ಕೊಡುತ್ತದೆ. ಸಾರ್ಥಕ್ಯದ ಸಂತೃಪ್ತಿ ಎಂಬುದು ಸಾಫಲ್ಯ ಯೋಗ.

''ಶ್ರೀऽऽऽ ಅರವಿಂದರೆಂದರೆ ಘೋಷಾ (ಆತ್ಮಧ್ವನಿ)
ಓಂऽऽ ಮಾತೆಗೆ ಸಂತೋಷಾ (ದರ್ಶನ)
ಗೆಳೆಯಾ ಮರೆಯ ಬ್ಯಾಡಾ ಗುರುತಾನೋ
ಓಹೋ ಹೆಮ್ಮರವಾಗಿ ಅರಿವಿಗೆ ಬರುವಾತಾ''

ಎಂದು ಬೇಂದ್ರೆಯವರು ೨೭-೧೨-೧೯೬೭ ರಂದು ಗುರು ಸ್ಮರಣೆ ಮಾಡಿಕೊಂಡರು. ೨೯-೩-೧೯೬೮ ರಂದು ಪ್ರಕಟಗೊಳಿಸಿದ ಕವನ ಸಂಗ್ರಹಕ್ಕೆ 'ಶ್ರೀಮಾತಾ' ಎಂದು ನಾಮಕರಣ ಮಾಡಿದರು. ಒಟ್ಟು ಐವತ್ತೆರಡು ವರ್ಷ ವಾಸವಾಗಿದ್ದ ನಿವಾಸ ಸ್ಥಾನಕ್ಕೆ 'ಶ್ರೀಮಾತಾ' ಎಂಬ ನಾಮವನ್ನು ೧೯೫೯-೬೦ಕ್ಕೆ ಪ್ರಕಟಪಡಿಸಿದ್ದರು.

''ಸವಿಶೇಷಾ ಮೀರಾಂಬಾ -
ಶ್ರೀಮಾತಾ । ಶ್ರೀ ಮಹಾರಾಜ್ಞೀ ।
ಶ್ರೀಮತ್ ಸಿಂಹಾಸನೇಶ್ವರೀ
ಚಿದಗ್ನಿಕುಂಡ ಸಂಭೂತಾ
ದೇವಕಾರ್ಯ ಸಮುದ್ಯತಾ''

ಎಂಬ ಲಲಿತಾ ಸಹಸ್ರನಾಮದ ಪ್ರೇರಣೆಯ ಸಂಬಂಧ ಸೂತ್ರ ಅರಿತುಕೊಂಡರು. ವಾಸ ಮಾಡಿದ ಸ್ಥಾನದಲ್ಲಿ ದೇವಕಾರ್ಯದ ಆರಂಭವಾಗಬೇಕು ಎಂಬ ಅಭೀಪ್ಸೆ ಅವರದಾಗಿತ್ತು.

''ಲೊಕಾರವಿಂದಕ್ಕ ಸಾಕಾರವಿಂದ ಆಗಬೇಕಾದ್ರ
ಶ್ರೀಮಾತಾ ಪಾದಾರವಿಂದಕ್ಕ
ಶರಣ ಆಗಬೇಕು
ಸಚ್ಚಿದಾನಂದ ಕರಣ ಆಗಬೇಕು
ಧಾರಾ (ಧಾರವಾಡ) ರಾಧಾ (ಶ್ರೀಮಾತೆಯ ಶಕ್ತಿ)
ರಸ ಆಗಬೇಕು''

ಎಂಬ ಬೇಂದ್ರೆ ಪ್ರಾರ್ಥನೆ ಅವರ ಜೀವಧ್ವನಿಯಾಗಿತ್ತು. ಈ ಬೆಳಕಿನಲ್ಲಿ ಬೇಂದ್ರೆ ಸಾಹಿತ್ಯ ಪಥ ನಾನು ಕಾಣುವುದು ಹೀಗೆ -

೩೩ ಕವನ ಸಂಗ್ರಹ; ೮ ಆಯ್ದು ಕವನ ಸಂಗ್ರಹ; ೧ ಮರಾಠಿ ಕವನ ಸಂಗ್ರಹ; ೧೪ ನಾಟಕ; ೨ ಮಾನಸ ನಾಟಕ; ೧ ಹರಟೆ, ನಗೆ ಹಾಡು, ಕಥೆಗಳ ಸಂಗ್ರಹ; ೧ ಅನುವಾದಿತ ಕಥಾ ಸಂಗ್ರಹ; ೧೦ ವಿಮರ್ಶೆ ಸಂಕಲನ; ೧ ಮರಾಠಿ ಲೇಖನ ಸಂಗ್ರಹ; ೭ ಉಪನ್ಯಾಸ ಸಂಗ್ರಹ; ೬ ಸಂಪಾದಿತ ಗ್ರಂಥ; ೩ ಸಂಪಾದಿತ ಪತ್ರಿಕೆ; ೬ ಅನುವಾದಿತ ಗ್ರಂಥ; ೧ ಅನುವಾದಿತ ಮರಾಠಿ ಕಾದಂಬರಿ; ೧ ಮರಾಠಿ ಉಪನ್ಯಾಸ; ೧ ಇಂಗ್ಲಿಷ್ ಪುಸ್ತಿಕೆ ಎಂದು ಮೊದಲಾಗಿ ೯೨ ಗ್ರಂಥಗಳ ಸಾಹಿತ್ಯಕೊಡಗೆ ಬೇಂದ್ರೆಯವರದು.

''ಕವಿಯು ವಿಶ್ವರೂಪ ದರ್ಶನಕಾರ. ತನ್ನ ಕಾಣ್ಕೆಯಿಂದ ರಸಿಕರ ನೇತ್ರೋನ್ಮಿಲನ ಮಾಡುವದು ಕವಿಯ ಶಬ್ದಶಿಲ್ಪ. *The finding of a new image is itself a joy to the poet and the hearer* - ಶ್ರುತಿಯನ್ನೂ, ಶ್ರೋತ್ರಿಯನನ್ನೂ ಸಮರಸಕ್ಕೆ ತರುವದು ಮಿಂಚಿನ ಮೂರ್ತಿ. ಅದು ರಸದೀಕ್ಷೆ. *"Much has been done by the art of rhythmic self expression, much remains to be done"* ಛಂದೋವಾಣಿ ಆಕ್ರಮಿಸಿದ ಮಾರ್ಗವು ವಿಪುಲವಾಗಿದ್ದರೂ, ಮಾನವನ ಭವ್ಯ ಯಾತ್ರೆಯ ಭವಿಷ್ಯ ಇನ್ನೂ ಇದೆ. ಮಹೇಶ್ವರಿಯ ಸೊಬಗನ್ನು, ಮಹಾಕಾಲಿಯ ಶಕ್ತಿಯಿಂದ, ಮಹಾಲಕ್ಷ್ಮಿಯ ಅಲಂಕಾರಗಳಲ್ಲಿ ನಿರೂಪಿಸುವ ಕುಶಲ ಕರ್ಮವು ಮಹಾಸರಸ್ವತಿಯ ಪಾಲಿಗೆ ಇನ್ನೂ ಇದೆ'' - (ಸಾಹಿತ್ಯದ ವಿರಾಟ್ ಸ್ವರೂಪ-ಪುಟ.೧೦೦) ಎಂಬ ಶ್ರದ್ಧೆಯ ಬೇಂದ್ರೆ ''ನೀನಾದಿನೀ - ದೇವತಾ ಸರಸ್ವತಿ'' ಎಂಬ ಕವನವನ್ನು ೧೯೬೬ರಲ್ಲಿ ಪ್ರಕಟಿಸಿ, ೧೯೮೧ರ ವರೆಗೂ ತಮ್ಮಿಂದ ಶ್ರೀ ಅರವಿಂದರ 'ಸಾವಿತ್ರಿ' ಮಹಾಕಾವ್ಯದಂಥ ಅವತರಣ ಕಾವ್ಯ ಹೊರಹೊಮ್ಮಬೇಕು ಎಂಬ ಪ್ರತೀಕ್ಷೆಯಲ್ಲಿದ್ದರು. ಆದುದರಿಂದಲೇ ಅವರು ೧೯೮೧ರಲ್ಲಿ ಧಾರವಾಡದ ಆಸ್ಪತ್ರೆಯಲ್ಲಿ ಪಿತ್ತಕೋಶದ ಹರಳುಗಳ ವೇದನೆಯಲ್ಲಿ ನರಳುತ್ತಿದ್ದರೂ 'ಸಾವಿತ್ರಿ'ಯ ಚಿಂತನೆ ಮಾಡುತ್ತಿದ್ದರು. ವೇದನೆ ನಿಂತಾಗ ನನ್ನನ್ನು, ಶರ್ಮಾ ಅವರನ್ನು ಶ್ರೀ ಅರವಿಂದರ ಭವಿಷತ್ ಮಹಾಕಾವ್ಯ ಸಾವಿತ್ರಿಯ ಅನುವಾದ ಸಾಧನೆಯಲ್ಲಿ ತೊಡಗಿಸುತ್ತಿದ್ದರು. ಅವರೂ ಆ ಸಾಧನೆ ಮಾಡುತ್ತಿದ್ದರು. ವಾಙ್ಮಯದ ಅಭ್ಯಾಸ ಪ್ರಾರಂಭಿಸಿದರು. ಹಳೆಯ-ಹಠಯೋಗ, ಪಾತಂಜಲಿಯ ರಾಜಯೋಗ, ಭಕ್ತಿ ಜ್ಞಾನ, ಕರ್ಮಯೋಗಗಳ ಅಭ್ಯಾಸ ಮಾಡಿ, ಶ್ರೀ ಅರವಿಂದರ ಪೂರ್ಣಯೋಗದ ಅನನ್ಯತೆ ಮತ್ತು ಹಿರಿಮೆ ಅರಿತುಕೊಂಡು ಅದರಂತೆ ಬಾಳಲು ಪ್ರಾರಂಭಿಸಿದರು. ಇದರ ಫಲವಾಗಿ - ಬೇಂದ್ರೆಯವರು ತಮ್ಮಲ್ಲಿ ಹೊರಹೊಮ್ಮಿದ ನಾಲ್ವರಿ (ಸೌಂದರ್ಯ ಚತುರ್ಮುಖ ಸಿದ್ಧಾಂತ) ಬೆಳಗು, ಹಸಿಹಂಬಲ ಮೊದಲಾದ ಕವನ ರಚನೆಗಳು ೧೯೧೮, ೧೯೨೦ರಲ್ಲಿ ಆದುದರ ಹಿರಿಮೆಯನ್ನು ಅರಿತುಕೊಂಡರು.

ಬೇಂದ್ರೆ ಕುಟೀರ, ಹುಬ್ಬಳ್ಳಿ
೨೫-೨-೨೦೦೫
ವರಕವಿ ದ.ರಾ.ಬೇಂದ್ರೆ ೧೧೯ನೇ ವಾರ್ಷಿಕ ಜನ್ಮದಿನ.

ಡಾ॥ ವಾಮನ ಬೇಂದ್ರೆ
ಸಹ ನಿರ್ದೇಶಕರು
ವರಕವಿ ಡಾ॥ ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಸಂಗೀತ ಅಕಾಡೆಮಿ

ಅಂಬಿಕಾತನಯನ ನುಡೀ ನುಡಿತಾವ ತೆರೀ ತೆರೀ ಎಂದೇ
ಓ ತಾಯಿ ಮಾಯಿ ಶಿವಜಾಯಿ ಕಾಯಿ ಈ ಬಾಯಿ ತುಂಬು ಒಂದೇ.

- ಹೃದಯ ಸಮುದ್ರ



## ೧ ಸ್ವಾತಂತ್ರದೇವಿಗೆ

೧

ಸ್ವಾತಂತ್ರ್ಯದ ಹುಟ್ಟುಹಬ್ಬ
ಕರೆವುದು ಸಾವಿರದ ಕಬ್ಬ
ಸುರಭಿಯಂತೆ ಇಂದಿಗೂ,
ಅದರ ಪದಕೆ ಗೆಜ್ಜೆ ಬೇಕೆ?
ಅದಕೆ ಬೇರೆ ರಾಗವೇಕೆ?
ಅದೇ ಗೀತವೆಂದಿಗೂ.

೨

ಶಾಂತ ಜಲಧಿಯಂತರಂಗ
ಕಾರಿತಣ್ಣ ಬೆಂಕಿಯ;
ಕೋರಿಯಾದ ಕುರುಕ್ಷೇತ್ರ
ಮುರಿಯಿತಗೋ ಶಂಕೆಯ
ಮರೆಯಿಸುವದೊ ನೆನೆಯಿಸುವದೊ
ರಾವಣನಾ ಲಂಕೆಯಾ.

೩

ಮಹಾಕಾಳಿ ಇಳಿದಳಣ್ಣ
ತನ್ನ ರುದ್ರಲೀಲೆಗೆ.
ಸೋದರರಾ ರಕ್ತ ಕುಡಿಯೆ
ಚಾಚಿ ಒಂದೆ ನಾಲಿಗೆ.
ಬೇರೆ ದೇವಿ ಬರುತಲಿಹಳು
ನೋಡು ಸ್ವಲ್ಪ ಮೇಲಿಗೆ.

೪

ಹಿಗ್ಗಿನೊಂದು ಉರುಳೆಯಂತೆ
ಅವಳ ಮುಖದ ಮಂಡಲ;
ಸಂಜೆಬಂಜೆತನವ ಹರಿಸಿ
ಮೆರೆಯೆ ತುಟಿಯ ಕೊಂಡಿಲ;
ಹೆಜ್ಜೆಯಿಟ್ಟ ಅಡಿಅಡಿಯಲಿ
ಅಗೋ ಯಜ್ಞಸ್ಥಂಡಿಲ.

೫

ಮುರು ಮುಸುಕು ಎಳೆದುಕೊಂಡು
ಮಲಗಿದೇಕೆ ಮಾನವಾ?
ಸುಡಿಸಿ ಸುಟ್ಟು ಕೆಡಿಸಿ ಕೆಟ್ಟು
ಕುಣಿಯುತಿಹನು ದಾನವಾ
ಧೀರೆ ಇಳೆಯ ಸೀರೆ ಸೆಳೆವ;
ಉಳಿಸೊ ಉಳಿಸು ಮಾನವಾ

೬

ಅದೇ ಅನ್ನ ಅದೇ ನೀರು
ವಿಶ್ವನರನ ಹಸಿವೆಗೆ;
ಬೆಳಕು ಗಾಳಿ ಸುತ್ತು ಒಂದು
ಪ್ರಾಣದ ಒಳ ಅಸುವಿಗೆ;
ಒಂದೆ ಬಯಲು ಬದುಕಲುಂಟು
ವಸುಂಧರೆಯ ಹಸುವಿಗೆ.

೭

ಚುಕ್ಕಿಗಳನು ಮೆಟ್ಟು ಮಾಡಿ
ಬರುತಲಿಹಳು ತಾಯಿಯು
ಅವಳ ಮಾತ ಕಲಿಯಲೆಂದು
ತೊದಲುತಿಹುದು ಬಾಯಿಯು
ಅವಳ ಬರವೆ ಕಾಯುತಿಹುದು
ಮರದ ಮರದ ಕಾಯಿಯು.





೮

ಚವಲಂಬವನವಲಂಬಿಸಿ
ನಗೆಯು ಕಣ್ಣಗೊನೆಗಿದೆ;
ಮುತ್ತು ಉರುಳಿ ಹೊರಳಿ ಮರಳಿ
ಬರಲು ತುಟಿಯ ನನೆಗಿದೆ;
ಮುಕ್ತಿ ಉಯ್ಯಲಾಟ ನೋಡು
ಮೂಗ-ಮೂಗತೆನೆಗಿದೆ.

೯

ಏಳೊ ಏಳು ಗೆಳೆಯ, ಕೇಳು
ಕರೆವ ತೂರ್ಯನಾದವ;
ಗೋಳಗುಮುಟದಂತೆ ಸೃಷ್ಟಿ
ನುಡಿಸುವ ಪಡಿಸಾದವ;
ಹೆಜ್ಜೆ ಹಾಕು, ಹಾಡ ಹೇಳು,
ನೀನೆ ನಾಳೆಯಾದವ.

೧೦

ದೀಪ ದೀಪ ಸಮುಸಮೀಪ
ಇದೊ ಭಾರತಹುಣ್ಣಿವೆ;
ಜೀವರಥಕೆ ಪ್ರಾಣದಶ್ವ
ತಾವೆ ತಾವು ಹಣ್ಣಿವೆ
ಎಲ್ಲ ಬೆಳಕು ಎಲ್ಲ ಬಯಲು
ಮಣ್ಣ ಕಣಕು ಕಣ್ಣಿವೆ.

೧೧

ಪ್ರೀತಿ ದೂತಿಯಾಗಿ ಬಂದು
ಕರೆಯುತಿಹಳು ಯಾತ್ರೆಗೆ,
ಎದೆಎದೆಗೂ ಹಬ್ಬವಾಗೆ
ದೇವಿ ದೇವ ಜಾತ್ರೆಗೆ;
ಬಾಳಿರಣ್ಣ ಆಳಿರಣ್ಣ
ಬೆಳಗು ಉಂಟು ರಾತ್ರಿಗೆ.

೧೨
ಬಾರೆ ತಾಯಿ, ಬಾರೆ ದೇವಿ,
ಓಗರೆವರು ಭಕ್ತರು;
ನಿನ್ನ ಮಕ್ಕಳೆಂದು ನಿನಗೆ
ಒಲಿವ ಜ್ಞಾನ ಶಕ್ತರು;
ನಿನ್ನ ಮನೆಯ ಕಟ್ಟಲಿಹರು
ದಿವ್ಯ ಕರ್ಮಯುಕ್ತರು.
೧೩
ನುಗ್ಗಿರಣ್ಣ ರಣದ ಕಣಕೆ,
ಅಸುರರಿಂದ ಬಿಡಿಸಿರಿ
ತಾಯ ಸೆರೆಯ, ಎಲ್ಲರಿಂದ
ಗೆಲವಿನ ಗುಡಿ ಹಿಡಿಸಿರಿ.
ಭೂಮಿದೇವಿ ನಲಿಯುವಂತೆ
ವಿಜಯಗೀತ ನುಡಿಸಿರಿ.
೧೪
ಕನ್ನಡವೂ ಕನ್ನಡಿಸಲಿ
ನಾಳೆ ಬಾಳಿನೊಸಗೆಯ;
ಜೀವನಕಲೆ ಬೆಳಗಲಲ್ಲಿ
ತಿಳಿದು ಕರಣ ಹಸುಗೆಯ;
ಪೂರ್ಣಪ್ರಜ್ಞರಾಗಿ ಪಡಲಿ
ಜೀವ-ದೇವ ಬೆಸುಗೆಯ.



- ಸೂರ್ಯಪಾನ : ೫೯/ಪ್ರ : ೧೯೫೬

---

ಭಾವ : ಜನವರಿ ೨೬ನೆಯ ಗಣರಾಜ್ಯ ದಿನದ ಅನುಸ್ಮರಣ. ಕೋರಿಯಾ ಯುದ್ಧದ ಕಾಲದಲ್ಲಿ ಬರೆದುದು.

ಶಬ್ದಾರ್ಥ : ಸುರಭಿ=ಸುಗಂಧ, ಕಾಮಧೇನು. ಸ್ಥಂಡಿಲ=ಭೂಮಿ, ಮರುಭೂಮಿ, ಸಾಗು ಮಾಡಿದ ಭೂಮಿ, ಬಹು ವಿಧದಿಗೆಯ್ದ ಭೂಮಿ, ಮೋಡ ಸಂಚಯ, ಸೀಮೆ. ಪಡಿಸಾದ=ಪ್ರತಿಧ್ವನಿ. ಕಣ=ಕುಸ್ತಿಯ ಸ್ಥಳ, ಯುದ್ಧ ಭೂಮಿ. ಕರಣಹಸುಗೆ=ಕರಣ=ಇಂದ್ರಿಯ+ಹಸುಗೆ=ವಿಭಾಗ, ಹಂಚಿಕೆ.

ವಿಶೇಷ : ೨೬ ಜನವರಿಯ ನಿಮಿತ್ತವಾಗಿ ಗೀತ ರಚಿಸಿದ್ದರೂ - ಜೀವ ದೇವ ಬೆಸುಗೆಯೆ ನಿಜವಾದ ಸ್ವಾತಂತ್ರ್ಯ ಎಂಬ ಧ್ವನಿ ಪ್ರಮುಖವಾಗಿದೆ.



## ೨ ಶ್ರೀಮಾತೃಶ್ರೀಗೆ

೧
ನಿನ್ನ ನೋಟವೆ ಹಾಲು
ತಾಯಿ ನೀನು.
ಕಂಗಳಿಂದಲೆ ಕುಡಿವೆ
ಕೂಸು ನಾನು.
೨
ಕಂಗಳಿಂದಲೆ ನುಡಿವೆ
ತಾಯಿ ನೀನು.
ನನ್ನ ಕಣ್ಣೇ ಕಿವಿಯು
ಕವಿಯು ನಾನು.

- ಹೃದಯ ಸಮುದ್ರ-೨೦/ಪ್ರ : ೧೯೫೬

---

ಭಾವ : ಶ್ರೀ ಮಾತೆಯವರ ದೃಷ್ಟಿ ಸೋಂಕಿದಾಗಿನ ಎಚ್ಚರದ ವರ್ಣನೆ.

ವಿಶೇಷ : ಶ್ರೀ ಮೀರಾ ಮಾತೆಯವರ ಜನನ ೨೧-೨-೧೮೭೮; ನಿರ್ವಾಣ ೧೭-೧೧-೧೯೭೩. ಬೇಂದ್ರೆಯವರು ಶ್ರೀ ಅರವಿಂದ ಹಾಗೂ ಶ್ರೀ ಮಾತೆಯವರ ಪ್ರಥಮ ಮಹಾದರ್ಶನ ಪಡೆದದ್ದು ೨೧ ಫೆಬ್ರುವರಿ ೧೯೪೩ರಲ್ಲಿ. ಆಗ ಆವರ ಭಾವ ''ಶ್ರೀ ಶ್ರೀ ಗುರು ಅರವಿಂದಾರ್ಪಣ ಮಸ್ತು ಹಾಗೂ ಶ್ರೀ ಶ್ರೀ ಮಾತೃ ಪ್ರಸಾದೋಸ್ತು'' ಎಂಬುದೇ ಆಗಿತ್ತು. ಅದು ನಿಷ್ಠೆಯಾಗಿ ಸರ್ವಸಂಪೂರ್ಣ ಸಮರ್ಪಣದಲ್ಲಿ ಐಕ್ಯ ಹೊಂದಿತ್ತು.



# ೩ ಬರುವಳು ಬರುವಳು

೧

ಬರುವಳು ಬರುವಳು ಬಂದೇ ಬರುವಳು
ಕಾದಿರಿ ಹಾಗೋ ಹೀಗೊ.
ನಸುಕಿನ ನಗೆಗಣ್ ಸೂಸುತ ಸುತ್ತೂ
ಈಗೋ ಇನ್ನಾವಾಗೋ.

೨

ಕಿಡಿಕಿಯಲ್ಲಿಣುಕುವ ನಗೆವೊಗದಂತೆ
ತಾರೆಗಳಾಚೆಯ ನೀಲಿಮೆಯಂತೆ
ಹನಿಸದೆ ಬರಿ ಸುರಿಯುವಳು ಬೆಳ್ಳಿಯ ಕಿರಣಗಳೇರಿ
ಹೊನ್ನಿನ ಹಡಗವ ಸೇರಿ.

೩

ಜಡಿವಳು ಸುರಿವಳು ತೊರೆಯುವ ಕರುಳು
ಯಾರಾರದೊ ಬಗೆಯರಳಿ,
ಜೀವವು ನಕ್ಷತ್ರವನುಗುಳುವುದು
ತೇಜಃಪುಂಜವು ಕೆರಳಿ.

- ಹೃದಯ ಸಮುದ್ರ-೧೧/ಪ್ರ : ೧೯೫೬

---

ಭಾವ : ಮದರ್ ಅವರ ದರ್ಶನಕ್ಕಾಗಿ ನಿರೀಕ್ಷೆಯಲ್ಲಿದ್ದಾಗ ಪ್ರದೀಪ್ತವಾದ ಭಾವದಚಿತ್ರ

ಶಬ್ದಾರ್ಥ : ನೀಲಿಮೆ=ನೀಲಿಬಣ್ಣ, ಸ್ನೇಹದ ಪ್ರತೀಕ.



# ೪ ದಿ ಮದರ್

*"It is through the Mother that all things are attained"*

– *Sri.Aurobindo*

೧

ಮಾಯೆಯನೆ ಮೊಲೆಗೊಳಿಸಿ ಹಾಲ್ಗುಡಿಸಿ, ಈ ತಾಯಿ
ಗಾಯತ್ರಿ ಮಂತ್ರಕ್ಕೆ ಭಾಷ್ಯ ಬರೆದವಳು
ಅಶ್ವಪತಿಯ ಉಪಾಸ್ಯ ದೇವತೆಯು ಸಾವಿತ್ರಿ!
ಸೂರ್ಯನಾಚೆಯ ಸೋಮಹಾಸ್ಯ ಕರೆದವಳು

೨

ಸತ್ಯವಂತರ ಮರ್ತ್ಯ ಡಿಂಭಗಳ ಗೊಂಬೆಯಲಿ
ಶಮರಮಿತ ನವ ಬಿಂಬ ಸೃಷ್ಟಿ ಮೆರೆದವಳು
ಮಾರ್ತಾಂಡ ಮಂಡಲದ ಅಂಡವನು ಪುಟಗೊಳಿಸಿ
ಹಂಸಜಾತಿಯ ಜೀವಜಾತಿ ತೆರೆದವಳು.

– ಹೃದಯ ಸಮುದ್ರ-೧೯/ಪ್ರ : ೧೯೫೬

---

ಭಾವ : ಶ್ರೀ ಮಾತೆಯವರ ಅದ್ಭುತವಾದ ಉದ್ಭವಶಕ್ತಿಯನ್ನು ಕುರಿತು.

ಶಬ್ದಾರ್ಥ : ಮಾರ್ತಾಂಡ=ಮಾರ್ತಂಡ=ಸೂರ್ಯ



## ೫ ಶ್ರೀತಾಯಿಗೆ

೧
ಹಾರುಹಕ್ಕಿಯ ತೆರದಿ ಬರುವೆ ಹಾರಯಿಸುತ್ತ
ನಿನ್ನ ನೀಲ ವಿಶಾಲ ಗಗನದಲ್ಲಿ.
ತಾಯಿ ಎನಿತೇ ನೀನು ದೂರವಿದ್ದರು ಏನು ?
ನನಗೆ ಎನಿಸುವೆ ನೀ ಸಮೀಪದಲ್ಲಿ.
೨
ಚಿಕ್ಕೆ ಬಾನಿನೊಳೊಂದು ಚುಕ್ಕೆ ನಾನೇ ತಾನು
ನಿನ್ನ ಹಿಗ್ಗಿಗೆ ನನ್ನ ಹಕ್ಕಿಗೊಳಿಸಿ,
ಕೂಗೆಂದೆ ಹಾಡೊಂದು ಕಂಠ ಹೃದಯದೊಳಿಕ್ಕಿ
ಆಟಕ್ಕೆ ಗರಿ-ಮೈಯ ತೊಡಿಗೆ ಕೊಡಿಸಿ,
೩
ರೆಕ್ಕೆ ಬಳಲಲು ನಾನು ಮೆಲ್ಲಗಿಳಿಯುತ ಕೆಳಗೆ
ಕೂರುವೆನು ಹೆಮ್ಮರದ ತಲೆಯನೊರಸಿ,
ಸುತ್ತು ಬಳೆಯಂತಿರುವ ನಿನ್ನ ನೀಲದ ನಿಲಯ
ಇಹುದು ಗೂಡಿನೊಲೆನ್ನನೆದೆಯೊಳಿರಿಸಿ.

– ಹೃದಯ ಸಮುದ್ರ-೨೪/ಪ್ರ : ೧೯೫೬

---

ಭಾವ : ನಿಷ್ಠೆಯ ಭಾವಗೀತ.

ಶಬ್ದಾರ್ಥ : ನೀಲದ=ನೀಲೀ ಬಣ್ಣದ ಆಕಾಶ.

## ೬ ಲೋಕಾಲೋಕೇ

೧

ಲೋಕಾಲೋಕೇ ಓಂ ತತ್‌ಸದಿತಿ
ಲೋಕಾಂತರ್ಗತ ಮಾತಾ ಅದಿತಿ
ದ್ವಾದಶಗತಿದಾಸೋಹಂ ವದತಿ
ಭಾರತಿ ಶ್ರೀ ಮಾತೇ,
ಭಾರತಿ ಶ್ರೀ ಮಾತೇ.

೨

ಮಘಾ-ಶ್ರವಣಗಳ ಸಾತ್ತ್ವಿಕ ಕಂದಾ
ಅಭಿಜಿತ್ ಅಭಿಜಿತ್ ಅಭಿಜಿತ್ ಎಂದಾ
ಅಧ್ರುವವಲ್ಲಾ ಧ್ರುವಗತಿಯಂದಾ
ಉಧೋ ಉಧೋ ಮಾತೇ,
ಉಧೋ ಉಧೋ ಮಾತೇ.

೩

ಗೋಗಳ ಮಧ್ಯೇ ನಿಜಗೋವಿಂದಾ
ಕೊಳಲಿನಲುಲಿಯೇ ಭಾವದ ಛಂದಾ
ಸಹಸ್ರಾರದಲಿ ಶ್ರೀ ಅರವಿಂದಾ
ಉದ್ಭವಿಸೌ ಮಾತೇ.
ಉದ್ಭವಿಸೌ ಮಾತೇ.

೪

ಅಸತ್ತಿನಿಂದಾ ಸತ್ತಿನ ಕಡೆಗೆ
ಅಭೂತದಿಂದ ಅಪೂರ್ವದೆಡೆಗೆ
ಅಜೀವದಲ್ಲೆ ಜೀವದ ನಡಿಗೆ
ನಡಿಸೌ ಶ್ರೀಮಾತೇ.
ನಡಿಸೌ ಶ್ರೀಮಾತೇ.

೫

ಕತ್ತಲೆಯಿಂದ ಜ್ಯೋತಿಯ ಬದಿಗೆ
ಅಶ್ರದ್ಧೆಯಿಂದಾ ಶ್ರದ್ಧಾನದಿಗೆ
ಅನೈಕ್ಯದಿಂದ ಐಕ್ಯದ ತುದಿಗೆ
ನಿಲಿಸೌ ಶ್ರೀಮಾತೇ.
ನಿಲಿಸೌ ಶ್ರೀಮಾತೇ.

೬
ಹತಿಮೃತಿ ಕಳೆದೂ ಅಮೃತವ ಸಾರಿ
ದೇವಜೀವನಾ ರಸನದಿ ಸೇರಿ
ಅವತರಣವು ಉದ್ಧಾರಕ್ಕೇರಿ
ಹಣ್ಣಿಸು ಶ್ರೀಮಾತೇ.
ಹಣ್ಣಿಸು ಶ್ರೀಮಾತೇ.

೭
ಮೇರೆಯಲ್ಲಿಯೇ ಮೇರುವೆ ಮೀರಾ
ಯಥಾಸ್ಥಿತಿಯಲೇ ತಥ್ಯವ ತೋರಾ
'ತಥಾಸ್ತು ತಥಾಸ್ತು ತಥಾಸ್ತು' ಸಾರಾ
ಹರಸೌ ಶ್ರೀಮಾತೇ.
ಹರಸೌ ಶ್ರೀಮಾತೇ.

೮
ಆಶೀರ್ವಚನವು ನಿನದಿಸುತಿರಲಿ
ಹೃದಯ ಪುಂಡರೀಕವು ತೆರೆದಿರಲಿ
ವಿಶ್ವಕೃಪಾನಿಧಿ ಅದರಲ್ಲಿರಲಿ
ಸಾಕ್ಷಾತ್ ಶ್ರೀಮಾತೇ.
ಸಾಕ್ಷಾತ್ ಶ್ರೀಮಾತೇ.

೯
ಭೂಮಂಡಲವೋ ಅಖಂಡ ಒಂದೇ
ಅನೇಕ ಮುಖವಿದೆ ಸತ್ಯದ ಮುಂದೆ
ಸೌಂದರ್ಯವು ಜೀವನ ಮುಖವೆಂದೇ
ನುಡಿಸೌ ಶ್ರೀಮಾತೇ.
ನುಡಿಸೌ ಶ್ರೀಮಾತೇ.

೧೦
ಭೂತವ ಎಂದೋ ಹೊಡೆದೋಡಿಸಿದೆ
ಹೊನ್ನಿನ ಕೋಟೆಯ ಹುಡಿಗೂಡಿಸಿದೆ
ಮುಂದಿನ ಭಾಗ್ಯವ ಒಡಮೂಡಿಸಿದೆ
ಜಯಜಯ ಶ್ರೀಮಾತೇ.
ಜಯಜಯ ಶ್ರೀಮಾತೇ.

೧೧

ಇಷ್ಟವ ಪ್ರಕಟಿಸಿ ಕಷ್ಟವ ದಾಟಿ
ರುದ್ರದಲ್ಲಿ ಶಿವಭದ್ರವು ನಾಟಿ
ಮರುದ್ಗಣಗಳಾ ಮಾರುತ ಧಾಟಿ
ಛಂದಿಸು ಶ್ರೀಮಾತೇ
ಛಂದಿಸು ಶ್ರೀಮಾತೇ

೧೨

ನಮೇ-ಚಮೇಗಳ ನಮಕಾ ಚಮಕಾ
ಯಮಕವಲ್ಲವೋ ಮಾತೆಯ ಗಮಕಾ
ನವಕ ಯುವಕಗತಿ ಹೃದಯಾಕ್ರಮಕಾ
ಮೂರ್ತಿಸು ಶ್ರೀಮಾತೇ.
ಮೂರ್ತಿಸು ಶ್ರೀಮಾತೇ.

- ಮುಗಿಲ ಮಲ್ಲಿಗೆ-೩/ಪ್ರ : ೧೯೬೧

---

ಭಾವ : ಶ್ರೀ ಮಾತಾ ಶ್ರೀ ಅರವಿಂದರ ಸ್ಮರಣೆಯೊಂದಿಗೆ ಸಲ್ಲಿಸಿದ ಪ್ರಾರ್ಥನೆ. ದಿಲ್ಲಿಯಿಂದ ಮುಂಬೈಗೆ ಪ್ರವಾಸ ಮಾಡುವಾಗ 'ಉಗಿ ಬಂಡಿಯ ಚಕ್ರಗಳೆಲ್ಲ ಒಂದು ಮೇಳದಲ್ಲಿ ಮೊದಲಿನ ಎರಡು ಸಾಲು ಸ್ವರಗೂಡಿಸುತ್ತಿವೆ' ಎಂದು ಬೇಂದ್ರೆಯವರ ಕಿವಿದುಂಬಿತು. 'ಗೌರಿಶಂಕರ ಶಿಖರಕ್ಕೆ ಯಾವುದೋ ಮರುತ್‌ಗಣ=ಗಾಳಿಯ ಗುಂಪು ಜಡೆಗೂದಲು ಬಿಟ್ಟು, ಕೌಪೀನಧಾರಿಯಾಗಿ ಕೈಯಲ್ಲಿ ಹಿಡಿದ ಶಲಾಕೆಗಳನ್ನು ಚಾರಿಸುತ್ತ ಲಗ್ಗೆಯಾಡುತ್ತಿವೆ' ಎಂಬ ದರ್ಶನವೂ ಆಯಿತು. ಈ ದರ್ಶನ ಆ ಶ್ರುತಿ ಕೂಡಿ, ಅದೇ ಆವೇಶದಲ್ಲಿ ಪ್ರಾರ್ಥನೆ ಹೊರಹೊಮ್ಮಿತು ಮಾರ್ಚಿಂಗ್ ಸಾಂಗಿನಂತೆ ಗತಿ ಇದೆ.

ಶಬ್ದಾರ್ಥ : ಅದಿತಿ=ಸ್ವರ್ಗ, ಪೃಥ್ವಿ, ಭಾರತಿ, ಪಾಂಡಿಚೆರಿಯ ಶ್ರೀಮಾತೆ, ದೇವತೆಗಳ ತಾಯಿ. ಹಣ್ಣಿಸು=ಪಕ್ವಗೊಳಿಸು.

ವಿಶೇಷ : ನುಡಿ-೨ ಕೊನೆಯ ಶಬ್ದ ಮೀರಾ-ಪಾಂಡಿಚೆರಿಯ ಶ್ರೀ ಮಾತೆಯವರ ಪೂರ್ವಾಶ್ರಮದ ಹೆಸರು.



## ೭ ಓ ತಾಯಿ-ಮಾಯಿ

೧
'ಓ ತಾಯಿ, ಮಾಯಿ, ಶಿವಜಾಯಿ, ಕಾಯಿ ನನ! ಯಾಕ ತೆರೆವೆ ಬಾಯಿ?
ಯಾ ಹಾದಿಲಿಂದ ನಾ ಹೋದರೇನು ಆಗ್ತೇನ ಅಲ್ಲೆ ನಾಯಿ.

೨
ಪ್ರತಿರೋಮಕೂಪದಾಗ ಕಾಮ ತುಂಬಿ ತುಳಕ್ಯಾಡತದ ಇಲ್ಲಿ
ನೀ ಜಪ್ಪಿಸಿರಲು ನಿನ ತಪ್ಪಿಸ್ಯಾರೆ ನಾ ಹೋಗಬಲ್ಲೆನೆಲ್ಲಿ?'

೩
'ಹಾಂಗಲ್ಲೊ ಮಗನ ನೀ ಭೋಗ ಬೇಡಿದಲ್ಲಲ್ಲು ಬಾಗಿಲಾಗಿ
ತೆರಿತಾವ ಹಾದಿ, ಅದಕಂತ ಕಾದಿ, ನಿನ ಮನಸೆ ಕನಸು ಆಗಿ.

೪
ತೆರದೇನಿ ಯೋಗ ನಿನ ಹೃದಯದಾಗ, ಬರಲೊಲ್ಲ್ಯೊ ಬ್ಯಾಗ ಒಳಗ,
ಈ ಕಲಕುಮಲಕು ಆದಾಗ ನಿನಗ ನಡದದ ಮ್ಯಾಲ ಕೆಳಗ.

೫
ಬಂದಾನ ಏನ ನನ ಕಂದ ಮನಿಗೆ ಇಂದಾರೆ ಅನತ ಮನಕ
ಎಂದಾರೆ ಬಾರೊ ಕಾದಿರುವೆ ಇಲ್ಲೆ ನೀನಾಗಿ ಬರುವ ತನಕ.

೬
ಅಡ್ಡಡ್ಡ ಹಾದಿ ನೀ ಹೋದ ಮ್ಯಾಲೆ ನಾ ಕಾದೆನೆಷ್ಟೊ ನಿನಗ
ಹಾಲ್ ಹಸಿವು ಹುಟ್ಟಿದಾಗ, ನೀನ ಬರತಿಯೋ ಚಿಂತಿ ಯಾಕ ನನಗ?

೭
ಓಡ್ಯೋಡಿ ಹೊರಟಿ ಎಲೆ ಬಾಲ! ಕಾಲ ನಿನ ನೋಡಿ ನೋಡಿ ನಗನ?
ನಿನ ಕಾಲ ನೊತು ಬರುವಾಗ ಬಾರೊ ನನಗೊಂದೆ ಹಾದ್ಯೊ ಮಗನ.

೮
ನನ ಬಣ್ಣ ನಿನ್ನ ಕಣ್ ಮ್ಯಾಲೆ ಏರಚಿ ಕಟ್ಟೇನೊ ಎಲ್ಲ ಹಾದಿ.
ನಿನ ಕಿವಿಗೆ ನನ್ನ ಸಿವಿದನೀ ಕಟ್ಟಿ ಬಿಟ್ಟೇನೊ. ಎಲ್ಲಿ ಹೋದೀ!

೯
ಆ ಗಾಳಿ ಜತಿಗೆ ನೀ ಗೂಳಿ ಹಾಂಗ ಅಡ್ಡ್ಯಾಡಿ ಹೇಳು ಏಸು?
ಮುಸುಗುಡುತ ಹೊರಟಿ ಬಯಲಾಗ ನಿನ್ನ ಮುಗದಾಣ ಭಾಳ ಬೀಸು.

೧೦
ನಾಡಾಡಿ ಹಕ್ಕಿ ನೀನಲ್ಲೊ ಮಗನ ಹೊಕ್ಕ್ಯಾಕ ಬೆಳ್ಳಕ್ಯಾಗ?
ನಿನ ತಾಯಿ ಕಣ್-ಹನೀಮುತ್ತ ಸುರಸತಾಳ ಮಾನಸ ಕೊಳ್ಳದಾಗ.

೧೧

ನಿನ ಹಸೀ ಹಸಿವಿಗೇ ಹೇಸಿ ನೀನೆ ಬಂದಾಗ ನನ್ನ ಮರಿಯೇ

ನನ ರುಚಿ ನಿನಗ ಶುಚಿ ಅನಿಸಿ ಹಸಿದು ಬಂದಾಗ ನಿನ್ನ ಮರೆಯೆ'

೧೨

'ಓ ಮಾಯಿ ಬಂದೆ, ಓ ತಾಯಿ ಬಂದೆ, ಓ ಕಾಯೆ ಕಾಯಿ ಬಂದೆ.

ನಿನ ಕಾಲ ನಾತ ಮೂಸಿಡುತ ಬಂದೆ'. ನಿನ ನಾಯಿಯಾಗಿ ಬಂದೆ.

೧೩

ಒಳಬಳಕಿ ಬೆಳಸ ಹಸಿದೇನ ತಾಯಿ ಸಣ್ಣಕ್ಕಿ ತಳಸಬೇಕ

ನಡುನಡುವೆ ನಕ್ಕು ಮತಮತ್ತ ಕದ್ದು ಕಣ್‌ಕುಡಿಲೆ ನೋಡಬೇಕ.

೧೪

ಕೈತುತ್ತ ಮಾಡಿ ತುತ್ತುತ್ತ ಉಣಸುವಾಗ ಸುತ್ತು ಆಡಬೇಕ

ನಡುನಡುವೆ ನಕ್ಕು ಮತಮತ್ತ ಕದ್ದು ಕಣ್‌ಕಡಿಲೆ ನೋಡಬೇಕ

೧೫

ನೀನು ಕೂಡ ಕೈಮರಿಗೆ ನಕ್ಕು ಕಣ್‌ಕೆಂಪು ಮಾಡಬೇಕು.

ಏ ಸುಳ್ಳ ಅಂತ ಅಪ್ಪಿದರ ತೊರಿದು ನನ ತಂಪು ಮಾಡಬೇಕು.

೧೬

ಓ ತಾಯಿ ಬಂದೆ, ಮಾಮಾಯಿ ಅಂದೆ, ಈ ಬಾಯಿ ತುಂಬು ಒಂದೇ

ಮಕರಂದ ಪಾನದಾ ಝರೀ

ತೆರಿತೆರೀ ನಿನ್ನ ತಾವರೀ

ಬಂದದ ತುಂಬಿಯಾ ಮರೀ.

೧೭

ಅಂಬಿಕಾತನಯನ ನುಡೀ ನುಡಿತಾವ ತೆರೀ ತೆರೀ ಎಂದೇ

ಓ ತಾಯಿ ಮಾಯಿ ಶಿವಜಾಯಿ ಕಾಯಿ ಈ ಬಾಯಿ ತುಂಬು ಒಂದೇ.

- ಹೃದಯ ಸಮುದ್ರ-೧೪/ಪ್ರ : ೧೯೫೬

---

ಭಾವ : ಕನಸಿನ ಸಂಚಾರಗಳಲ್ಲಿ ತನ್ನ ಸ್ಥಾಯಿಯೇ ಚ್ಯುತಿಗೊಳ್ಳುವದೊ ಎಂಬ ಭಯ ವಿಹ್ವಲ ವಾತ್ಸಲ್ಯಭಾವದಲ್ಲಿ ಬಂದ ಲಾವಣ್ಯ ಲಹರಿ.

ಶಬ್ದಾರ್ಥ : ಕಲಕುಮಲಕು=ತಳಮಳ, ಕ್ಷೋಭೆ. ಕಾಲ=ಯಮ. ನೂತು=ನೋಯುವ ಸ್ಥಿತಿ.

# ೮ ಹೋಗೋ ಬಾರೋ ಮಾಡಬ್ಯಾಡಾ

೧

ಹೋಗೋ ಬಾರೋ ಮಾಡಬ್ಯಾಡಾ
ಇರೋ ಹುಡುಗಾ ನೀನು
ಅಗೋ ಇಲ್ಲೇ ಗೋಲೋಕದಲ್ಲೇ
ತಗೋ ಇಗೋ ತಾನು.

೨

ನಗೋ ಹುಡುಗಾ ನಗೋ ಹುಡುಗಾ
ಒಂದು ಮಾತು ಕೇಳು
ನಭಗೋ ಭಗವಾನ್ ನಭಗೋ ಭಗವಾನ್
ಗಭಸ್ತಿ ಅಗಸ್ತ್ಯ ಹೇಳು.

೩

ಅರವಿನಿಂದೋ ಇರವಿನಿಂದೋ
ಹರವಿನಿಂದೋ ಹಿಗ್ಗು
'ಶ್ರೀ ಅರವಿಂದೋ' ಅನ್ನು ಅರಳು
ಪಾಪಾ ನೀನು ಮೊಗ್ಗು.

೪

ಮಾತಾ ಮಾತಾ ಏಕಪ್ರಮಾತಾ
ಶ್ರೀ ಮಾತಾನೇ ತಾ ಈ
ಆಈ, ಈಈ, ಊಈ, ಎಂತಾ
ನಾಲಿಗೆ ಇದ್ದರೆ ಬಾ ಈ.

- ಶ್ರೀಮಾತಾ-೨೧/ಪ್ರ : ೧೯೬೮

---

ಭಾವ : ಪಾಂಡಿಚೆರಿಯ ಶ್ರೀ ಮಾತಾ ಹಾಗೂ ಶ್ರೀ ಅರವಿಂದ ಎಂಬ ನಾಮದೊಡನೆ ಶ್ವಾಸೋಚ್ಛ್ವಾಸ - ಹೋಗೋ ಉಸಿರು, ಬರೋ ಉಸಿರು - ಮಾಡುವುದೇ ಪೂರ್ಣ ಯೋಗ ಸಾಧನೆಯ ಮಾರ್ಗ. ಉಸಿರು ಬಾರದಿದ್ದರೆ ಉಚ್ಚಾರ ಅಸಾಧ್ಯ ಎಂಬ ಭಾವಚಿಂತನ.

ಶಬ್ದಾರ್ಥ : ಗಭಸ್ತಿ=ಸೂರ್ಯ. ಅಗಸ್ತ್ಯ=ಒಂದು ನಕ್ಷತ್ರ. ಇದು ಭಾದ್ರಪದ ಮಾಸದಲ್ಲಿ ದಕ್ಷಿಣಕ್ಕೆ ಉದಿಸುತ್ತದೆ. ಇದರ ಪರಿಣಾಮವಾಗಿ ನೀರು ಶುದ್ಧವಾಗುತ್ತದೆ. ಇದೇ ಅಗಸ್ತ್ಯೋದಯ. ಈ=ಕೊಡು, ಕಾಯಿ. ನಾಲಿಗೆಯ ಸ್ಪರ್ಶವೇ ವರ್ಣೋಚ್ಚಾರ.

ಕೊಡು ತಂದೇ, ಇನ್ನೊಂದೇ
ಒಂದೇ ಬಾಯ್ತುತ್ತುಕು,
ಕೊಡು ತಾಯೇ ಇನ್ನೊಮ್ಮೆ
ಒಮ್ಮೇ ಎದೆ ಗುಟುಕು.

- ಹೃದಯ ಸಮುದ್ರ

# ೯ ಶ್ರೀ ಅರವಿಂದರಿಗೆ



೧

ನಿನ್ನಾ ಹುಬ್ಬಿನ ಇಬ್ಬದಿ
ಗರಿ ಚಾಚಿದೆ ಗರುಡ.
ಬಾನ್ಗಣ್ಣಾಗಿಹೆ ನೀ, ನಾ
ಗುರಿಯಿಲ್ಲದ ಕುರುಡ.

೨

ಕಣ್ಣಿವೆ ಚಾಟಿಗೆ ಕಟ್ಟಿದೆ
ಆನಂದದ ಹುಟ್ಟು
ಒಳಗಿದೆ ಹೂವರಳಿದವೊಲು
ವಿಶ್ವದ ಇಡಿಗುಟ್ಟು.

೩

ಕೊಡು ತಂದೇ, ಇನ್ನೊಂದೇ
ಒಂದೇ ಬಾಯ್ಗುಟುಕು,
ಕೊಡು ತಾಯೇ ಇನ್ನೊಮ್ಮೆ
ಒಮ್ಮೇ ಎದೆ ಗುಟುಕು.

- ಹೃದಯ ಸಮುದ್ರ-೨/ಪ್ರ : ೧೯೫೬

---

ಭಾವ : ಶ್ರೀ ಅರವಿಂದರ ಭಾವಚಿತ್ರದ ಧರ್ಶನದಿಂದ ಉದ್ದೀಪ್ತವಾದ ಚಿತ್ರ ಮತ್ತು ಭಾವ. ಶ್ರೀ ಅರವಿಂದರ ಕಾಲ-೧೮೭೨ ರಿಂದ ೧೯೫೦.

ಶಬ್ದಾರ್ಥ : ಚಾಟು-ಚಾಟಿಗೆ=ಸಂತೋಷಕರವಾದ ರಕ್ಷಣೆಗಾಗಿ.

ವಿಶೇಷ : ದ. ರಾ. ಬೇಂದ್ರೆಯವರು ಶ್ರೀಮಾತಾ ಶ್ರೀ ಅರವಿಂದರ ಪ್ರಥಮ ದರ್ಶನ ಪಡೆದದ್ದು ೨೧ನೇ ಫೆಬ್ರುವರಿ ೧೯೪೩ರಲ್ಲಿ.

# ೧೦ ಅರವಿಂದನಾಭನ ಪಾದಾರವಿಂದಕ್ಕೆ

ಅರವಿಂದನಾಭನ ಪಾದಾರವಿಂದಕೆ ಹಸ್ತಾರವಿಂದವು ಬಾಗುತಿರೆ,
ನಯನಾರವಿಂದವು ಮುಚ್ಚಿಕೊಂಡಿರುವಾಗ ಹೃದಯಾರವಿಂದವು ಅರಳಲಿರೆ
ಆಸ್ಯಾರವಿಂದವು ನಲಿವನು ಸೂಸುವ ತೆರ ನಿನಗೆ ಸೂಸಲಿ ಮಂಗಲವು
ಎಂದಿತು ಅರವಿಂದ ಪದಭೃಂಗ ಅರವಿಂದು! ಅರವಿಂದಮಯವಾದ ಮಾನಸವು.

- ಹೃದಯ ಸಮುದ್ರ-೬/ಪ್ರ : ೧೯೫೬

---

ಭಾವ : ಶ್ರೀ ಅರವಿಂದರ ತನ್ಮಯತೆಯ ಚಿತ್ರ ಇಲ್ಲಿ ಮೂರ್ತಿಸಲಾಗಿದೆ.

ಶಬ್ದಾರ್ಥ : ಅರವಿಂದು=ಅರವಿಂದರ ಪದಭೃಂಗದ ಹೆಸರು. ಅರವು+ಇಂದು=ಇಂದಿನ ಜ್ಞಾನ.

ವಿಶೇಷ : ಒಂದು ಮುದ್ರಣದಲ್ಲಿ ಈ ಕವನ ೬ ಸಾಲುಗಳ ೨ ಷಟ್ಪದಿಯಾಗಿ ಬೇಂದ್ರೆ ಮಾಡಿದ್ದು ಹೀಗೆ-

೧

ಅರವಿಂದ ನಾಭನ
ಪಾದಾರವಿಂದಕೆ
ಹಸ್ತಾರವಿಂದವು ಬಾಗುತಿರೆ ॥
ನಯನಾರವಿಂದವು
ಮುಚ್ಚಿಕೊಂಡಿರುವಾಗ
ಹೃದಯಾರವಿಂದವು ಅರಳಲಿರೆ ॥

೨

ಆಸ್ಯಾರವಿಂದವು
ನಲಿವನು ಸೂಸುವ
ತೆರ ನಿನಗೆ ಸೂಸಲಿ ಮಂಗಲವು
ಎಂದಿತು ಅರವಿಂದ
ಪದಭೃಂಗ ಅರವಿಂದು
ಅರವಿಂದ ಮಯವಾದ ಮಾನಸವು.

# ೧೧ ಸದಾಶಿವಗೆ

೧

ಶ್ರೀಗುರುವಿಗಾಗಿ ತನುಧಾರಿಯಾಗಿ ಬಂದಂಥ ಸದಾಶಿವಗೆ
ಅನಂತಾನಂತ ನತಿಯ ಉಪಕೃತಿಯ ಒಪ್ಪಿಸುವೆವು ಇವಗೆ.
"ಎಷ್ಟು ದುಡಿದೆ ನೀನೆಷ್ಟು ಪಡೆದೆ ಹೇ! ನಮೋ ನಮೋ ನಿನಗೆ."

೨

ಕಷ್ಟವೇನು, ಸಂಘರ್ಷವೇನು, ಪಾಡೇನು, ತಾಳ್ಮೆಯೇನು?
ನಮಗಾಗಿ ಕಲ್ಪ, ನಮಗಾಗಿ ಶಿಲ್ಪ ಸಾಧಿಸಿದೆ ನಮಗೆ ನೀನು.

೩

ಬಾಗಿ ಕೂಗಿ ಬೇಡುವೆವು ನಿನಗೆ ಅರೆಚಣವು ಕೂಡ ನೋಡು
ನಮ್ಮ ಸಂಪದವು ನಿನ್ನ ಪ್ರಾಪ್ತಿ ಇದ ಮರೆಯದಂತೆ ಮಾಡು

- ಚೈತ್ಯಾಲಯ : ೫೦/ರಚನೆ : ೮-೧೨-೧೯೫೦

---

ಭಾವ : ಶ್ರೀ ಅರವಿಂದರು ಸಮಾಧಿ ಹೊಂದಿದ ಸ್ಮರಣೆಯ ಕವನ.

ಶಬ್ದಾರ್ಥ : ನತಿ=ನಮಸ್ಕಾರ.



## ೧೨ ಬೆಳಕಿನ ಲಿಂಗ

೧

ಕೂಡು ಬಾ, ಕೂಡು ಬಾ ಲಿಂಗವೇ। ನೀ
ಕೂಡಲು ಒಲ್ಲೇಕೊ ಲಿಂಗವೇ ?
ಕೂಡಲದಲ್ಲೊಗೆವ ಮೂಡಲದೊಲವಿನಲಿ
ಮೂಡಿ ಬಾ, ಮುತ್ತಿನ ಲಿಂಗವೇ !

೨

ಮಾತಾಡೊ ಮಾತಾಡೊ ಲಿಂಗವೇ। ನೀ
ಮಾತಾಡಲೊಲ್ಲೇಕೊ ಲಿಂಗವೇ ?
ಮಾತಿನ ಬಸಿರಲ್ಲಿ ನೆಲೆಗೊಂಡ ಮೌನದಿ
ಹೂತಂಥ ಬೆಳಕಿನ ಲಿಂಗವೇ !

೩

ಗುಡುಗಾಡೊ ಗುಡುಗಾಡೊ ಲಿಂಗವೇ। ನೀ
ಗುಡುಗಾಡಲೊಲ್ಲೇಕೊ ಲಿಂಗವೇ ?
ನಡುಹಗಲ ನೆತ್ತಿಯ ಮೋಡದ ಒಡಲಲ್ಲಿ
ಮಿಡುಕುವ ಮಿಂಚಿನ ಲಿಂಗವೇ !

೪

ಉರಿದೇಳೊ ಉರಿದೇಳೊ ಲಿಂಗವೇ। ನೀ
ಹರಿದೇಳಲೊಲ್ಲೇಕೊ ಲಿಂಗವೇ ?
ಉರದ ಕತ್ತಲೆಯನ್ನು ಹುರಿದು ಕಿಡಿಕಿಡಿಯಾಗಿ
ಮೆರೆವಂಥ ಬೆಂಕಿಯ ಲಿಂಗವೇ !

- ಹೃದಯ ಸಮುದ್ರ-೨೫

---

ಭಾವ : ಶ್ರೀ ಗುರುವಿನ ಬ್ರಹ್ಮಸಮಾಧಿಸ್ಥ ತೇಜಃಪುಂಜಕ್ಕೆ ಆಹ್ವಾನ.

ಶಬ್ದಾರ್ಥ : ಉರ=ಎದೆ. ಕೂಡಲ=ಸಂಗಮ, ಒಂದಾಗುವಿಕೆ. ಬೆಳಕಿನ ಲಿಂಗ=ಶ್ರೀ ಅರವಿಂದರು ವರ್ಣಿಸಿರುವ ಸುಪ್ರಮಾನಸ ಪ್ರಕಾಶ.

ವಿಶೇಷ : ಈ ಕವನವನ್ನು 'Oh! Linga of Supramental Light' ಎಂದು ಭಾಷಾಂತರಿಸುವ ಯೋಚನೆ ಬೇಂದ್ರೆಯವರಿಗಿತ್ತು ಎಂದು ಅವರ ಟಿಪ್ಪಣಿಯಿಂದ ತಿಳಿಯುತ್ತದೆ.

# ೧೩ ಒಂದು-ಹಲವು

*"To be or to become something, to bring something into being is the whole labour of the force of Nature"*

**- Sri Aurobindo**

೧

ಇರುವುದೊಂದೆ ನೆರೆದು ಮುಂದೆ ಹಲವು ಫಲವ ಪಡೆವುದು.
ಅರಿವುದೊಂದೆ ಬೆರೆತುಕೊಂಡೆ ಹಿಗ್ಗ ಪಡೆದು ನಡೆವುದು.
ಬೀಜದಲ್ಲಿ ಮರಗಳಲ್ಲಿ ಜನನಿಪ್ರಕೃತಿ ಮೆರೆವಳು.
ಅರಿವಿನಲ್ಲಿ ಇರವ ಬೆಳೆಸಿ ಜನಕಪುರುಷ ತೆರೆವನು.

೨

ಮನದ ಗಂಟ ಕಟ್ಟಿಕೊಂಡು
ಬೆನ್ನಮೇಲೆ ಹೊತ್ತುಕೊಂಡು
ಜನುಮವೇಕೆ ಕಳೆವುದು ?
ತತ್ತ್ವ ನೀನು ಬೇರೆ ಏನು ?
ಅದೇ ಆಗಿ ನಾನು ನೀನು
ವಿಶ್ವದಲ್ಲಿ ಮೊಳೆವುದು.

೩

ಓಂ ನಮಃ ಶಿವಾಯ ಎಂದು
ಪ್ರಾಣ-ಲಿಂಗ-ಶಕ್ತಿ ಒಂದು
ಅನುಗ್ರಹವ ತಾಳುವಾ.
ಏಕಾತ್ಮದ ಶರಣರಾಗಿ
ದಿವ್ಯಸೃಷ್ಟಿ ಕರಣರಾಗಿ
ವಿಗ್ರಹದೊಲು ಬಾಳುವಾ.

೪

ಇದೇ ಸಂಧಿ ಇದೇ ಶಾಂತಿ ಮನುಕುರುಕುಲ ಕ್ಷೇತ್ರಕೆ.
ಈ ವಿರಾಟ ದೊಡ್ಡ ಆಟ ಪಾತ್ರ ಬೇರೆ ನೇತ್ರಕೆ ?
ನಟನಿಗೆ ಜಯ, ನಾಟಕಕ್ಕೆ ಜಯ ನಾಟಕಕಾರಾ
ಸಾಕ್ಷಿಪುರುಷ ದೃಶ್ಯಗಳಲಿ ನೀ ವಿಶ್ವಾಕಾರಾ.

೫

ಬ್ರಹ್ಮದಲ್ಲಿ ಮಾಯೆಯೆಂದೊ
ಮಾಯೆಯಲ್ಲಿ ಬ್ರಹ್ಮವೆಂದೊ
ಶಬ್ದದಲ್ಲಿ ಮೂಡಿದೆ.
ಶ್ರದ್ಧೆಯಂತೆ ಬುದ್ಧದೇವ
ದೇವನಂತೆ ಪ್ರಕೃತ ಜೀವ
ಈ ಭಾವ ಹಾಡಿದೆ.

- ಹೃದಯ ಸಮುದ್ರ-೫೬

---

ಭಾವ : ಒಂದು ಮತ್ತು ಹಲವು ಎಂಬ ತತ್ತ್ವದ ಹಾಗೂ ಶ್ರದ್ಧೆಯ ಚಿಂತನ.



# ೧೪ ಪ್ರಾಣಪಕ್ಷಿ

೧

ಕಣ್ಣು ಕಾಮಾಕ್ಷಿ, ಮನವು ಮೀನಾಕ್ಷಿ,
ಚಿತ್ತ ಚೈತ್ಯ ಸಾಕ್ಷಿ.
ಪಕ್ಷಪುಚ್ಛ ಮೈ ಚೂಚು ಚಾಚಿದರು
ಬೇರೆ ಪ್ರಾಣಪಕ್ಷಿ.

೨

ದೃಷ್ಟಿ ದಿಟವೆಂಬೆ, ಸೃಷ್ಟಿ ಸಟೆಯೆಂಬೆ,
ದೃಷ್ಟ ನಷ್ಟವೆಂಬೆ.
ಕಾಂಬುವನ ನಂಬೆ, ಹುಸಿ ಚಿಗುರ ಕೊಂಬೆ,
ಓ ಹೇಡಿ-ಮಣ್ಣ ಗೊಂಬೆ!

೩

ಕಿಡಿ ಇಲ್ಲದಲ್ಲಿ ಕುಡಿ ಒಡೆವುದೆಂತು?
ಮಿಡಿ ಹಿಡಿವುದೆಂತೊ ಕಾಣೆ,
ತಂತಿ ಝುಣಗುಡದ ಪೊಳ್ಳು ಸೊಟ್ಟೆ
ಎನಿಸೀತು ಹೇಗೆ ವೀಣೆ?

- ಹೃದಯ ಸಮುದ್ರ-೫೨

---

ಭಾವ : 'ಸಾವಿತ್ರಿ' ಅನುವಾದದ ಕಾಲಕ್ಕೆ ಸ್ಫುರಿಸಿದ ಕವನ.

ಶಬ್ದಾರ್ಥ : ಸಟೆ=ಸುಳ್ಳು. ಕಾಂಬುವನ=ಕಾಣುವವನ. ಸೊಟ್ಟೆ=ಡೊಂಕೆ, ವಕ್ರವೆ.

# ೧೫ ಬೆಳಕು

೧
ಬೆಳಕು ಬೆಳಕು ಕೊನೆಯಿರದ ಬೆಳಕು ಕತ್ತಲೆಗೆ ಖಣವೆ ಇಲ್ಲ.
ಪ್ರಾಣದಲ್ಲಿ ಅಜ್ಞಾತ-ಖಾತ ತೆರೆವುದು ರಹಸ್ಯವೆಲ್ಲ.
ಜಡದಗಾಧ ಆ ಖಾತ ಮುಂಚೆ ಮುಚ್ಚಿತ್ತು ತನ್ನ ನೆಲೆಯ.
ಲವಲವಿಕೆಯಲ್ಲಿ ಎಚ್ಚೆತ್ತು ಈಗ ಎತ್ತಿಹುದು ತನ್ನ ತಲೆಯ.
೨
ಬೆಳಕು, ಹೊತ್ತಿರದ ಬೆಳಕು ತನ್ನ ತಾನಾದ ಅಚ್ಚವೆಳಕು
ಪಾವಿತ್ರ್ಯ ಮುದ್ರೆಯಲ್ಲಿದ್ದ ಗೂಢ ತೆರೆದಿತ್ತು ತನ್ನ ಫಡಕು
ಬೆಳಕು ಬೆಳಕು ಕಿಚ್ಚೆದ್ದ ಬೆಳಕು ಆನಂತ್ಯ ಹೃದಯರತ್ನ
ಎದೆಯಲೆನ್ನ ಪ್ರಸ್ಪಂದಿಸುತ್ತ ಅರಳಿದೆ ಗುಲಾಬಿ ನೂತ್ನ.
೩
ಬೆಳಕೊ ಬೆಳಕೊ ನರನಾಡಿಯಲ್ಲಿ ತುತೂರಿ ಕುಣಿವುತೆದ್ದು
ಧ್ಯಾನಸ್ಥ ಬೆಳಕು! ಆ ಕಾವಿನಂದ ಜೀವಾಣು ತಣಿವುತಿದ್ದು
ಆನಂದ ಮುಗ್ಧ ಸುಸಮಾಧಿಯಲ್ಲಿ ಪ್ರಜ್ವಲಿಸುತಿಹುದು ತೀರಾ
ಅಮೃತ ಸ್ಪರ್ಶ ನೆನೆವಂತೆ ರಸದಿ ನಾಂದಿಹವು ಪುಟ್ಟಪೂರಾ.
೪
ದೀಪ್ತಿಸಾಗರದ ಬೃಹದ್ಗರ್ಭದಲಿ ಸ್ತಂಭದಂತೆ ನಿಂತೆ
ಮೂಲದಗ್ನಿಯನು ಮೇಲಿನಗ್ನಿಯಲಿ ಒಂದುಗೊಳಿಸುವಂತೆ!

- ಚೈತ್ಯಾಲಯ-೧೪

---

ಭಾವ : Light-ಕವನದ ಭಾವಾನುವಾದ.

ಶಬ್ದಾರ್ಥ : ಖಣ=ಖಾನೆ, ನಿವಾಸ, ವಿಭಾಗ. ಖಾತ=ತೋಡಿದ, ಆಳ, ಪುಷ್ಕರಣಿ. ಫಡಕು=ಬಾಗಿಲದ ಭಾಗ.

# ೧೬ ಸಹಸ್ರತಂತ್ರೀ ನಿಃಸ್ವನದಂತೆ

೧

ಸಹಸ್ರತಂತ್ರೀ ನಿಃಸ್ವನದಂತೆ
ಮಾತರಿಶ್ವನಾ ಘನಮನದಂತೆ
ಗುಡುಗಾಡುತ್ತಿದೆ ಗಗನದ ತುಂಬ
ಪ್ರಣವ ಪ್ರವೀಣನ ನಾದಸ್ತಂಭ.

೨

ಏಕದಿಂದಲೇ ಉದಿಸಿದೆ ಸರ್ವ.
ಐಕ್ಯ ಧರಿಸಿಯೇ ಆಳುವನೊರ್ವ.
ಆ ಒರ್ವನೊಳೇ ಸರ್ವವು ಸೇರಿ
ಜಯವನು ಸಾರಲಿ ಧರ್ಮದ ಭೇರಿ

೩

ದದದಾ ದದದೋಂ ದಮದಯ ದತ್ತೋಂ
ದಿಕ್ತಟ ತಟವಟ ಧಿಗಿದಂ ಧಿಕ್ತೋಂ
ನಿರ್ದ್ವಂದ್ವದೊಳೆದ್ದಿತು ಓಂ ನಾದ
ತಾಂಡವೇಶ್ವರನ ಅಖಂಡವಾದ.

೪

ಸತಿಮುಖಸುಸ್ಮಿತ ಜನಿತ ಸುವೇದ.
ಶರಣನ ಚಿದ್ಗತಿ ಶರಣ್ಯವೇಧ
ಮಧುರಾಭಕ್ತಿಯ ಮಧುರಾ ಗೀತ
ವೇಣುಧ್ವನಿಯಲಿ ಆತ್ಮಪ್ರೀತ.

೫

ಮಾನವ-ದಾನವ-ದೇವ ದೇವತಾ.
ಯುಗಯುಗ ಗರ್ಭಿತ ಜೀವ ಜೀವಿತಾ
ಮೂರ್ತಿತವಾಗಲಿ ಪ್ರಾರ್ಥನೆಗಾಗಿ
ಉದ್ಭವ ಭವಿಷ್ಯ ಸಾರ್ಥಕವಾಗಿ.

೬

ಸಹಸ್ರಾರವಿಂದೋತ್ಥಿತಬಾಲೆ
ಬ್ರಹ್ಮಹೃದಯರತಿ ಸುಷುಪ್ತ ಜ್ವಾಲೆ
ಏನಿದೆ? ಏನಿದೆ? ಏನಾಮೇಲೆ.
ಕೃಪಾಪುಷ್ಪಗಳ ಅನಂತಮಾಲೆ.

೭
ಧರ್ಮಮೇಘವೇ ವರ್ಷಿಸುವಂತೆ
ಸತ್ಯದ ಸತ್ತ್ವವ ಸ್ಪರ್ಷಿಸುವಂತೆ
ಧರಣಿಯ ಕೆಚ್ಚಲ ಹರ್ಷಿಸುವಂತೆ
ಬರಲಿದೆ ಮಳೆ ಉದ್ಘರ್ಷಿಸುವಂತೆ-

- ಸಹಸ್ರತಂತ್ರೀ ನಿಃಸ್ವನದಂತೆ.

- ಹೃದಯ ಸಮುದ್ರ-೬೦

---

ಭಾವ : ಶ್ರೀ ಅರವಿಂದರ ಆಶೀರ್ವಚನವು ಶ್ರೀ ಮಾತೆಯವರ ಕರುಣಾ ಪ್ರಸಾದದಿಂದ ವಾಸುದೇವ-ಜೀವನದತ್ತ ಗಂಗಾವತರಣದಂತೆ ಇಳಿದುಬರುತ್ತಿದೆ ಎಂಬ ಭೂಕಂಪದ ಆಘಾತ ೨೮ ಫೆಬ್ರುವರಿ ೧೯೫೬ನೆಯ ದಿನ ಬೆಂಗಳೂರತ್ತ ಪ್ರವಾಸ ಮಾಡುವಾಗ ಎಲಹಂಕ ನಿಲ್ದಾಣದ ಬಳಿ ಮೂರ್ತಗೊಂಡು, ಭಾವಗೀತವಾಯಿತು. ಗಾಡಿಯೊಳಗಿನ ಫ್ಯಾನ್‌ನಿಂದ ವೇದಮಂತ್ರ ಕೇಳಿಸುತ್ತಿದ್ದವು. ಬಂಗಾರದ ಹುಡಿ ಧಾರಾಕಾರವಾಗಿ ಸುರಿಯುತ್ತಿರುವ ದರ್ಶನವಾಯಿತು.

ಶಬ್ದಾರ್ಥ : ಮಾತರಿಶ್ವ=ಹಡಗವನ್ನು ತೇಲಿಸುವ ವಾಯು. ಪ್ರಣವ=ಓಂಕಾರ ಮಂತ್ರ. ಸುಷುಪ್ತ=ಗಾಢವಾಗಿ ನಿದ್ರಿಸ್ಥ

ವಿಶೇಷ : 'Mother India' ೧೯೮೨ರ ಸಂಚಿಕೆಯಲ್ಲಿ ಈ ಕವನದ ಮಹತ್ತ್ವ ಪ್ರಕಟಿಸಲಾಗಿದೆ. ೨೯ ಫೆಬ್ರುವರಿ ೧೯೫೬ರಲ್ಲಿ ನಡೆಯಿತೆನ್ನಲಾದ Supramental Manifestationಗೆ ಸಂಬಂಧಪಟ್ಟ ಅನುಭಾವವು ಪಾಂಡಿಚೆರಿಯ ಶ್ರೀ ಅರವಿಂದರ ಆಶ್ರಮದ ಹೊರಗಿನ ಇಬ್ಬರು ಸಾಧಕರಿಗೆ ಉಂಟಾಯಿತು. ಅವರಲ್ಲಿ ದ್ರಷ್ಟಾರ ಕವಿ ಬೇಂದ್ರೆ ಒಬ್ಬರು. ಅವರಿಗೆ ಒಂದು ದಿವಸ ಮೊದಲೇ ಸ್ಪಂದನ ತಲುಪಿತು ಎಂಬುದಾಗಿ ಡಾ। ಕೆ. ಡಿ. ಸೆಟ್ನ ಬರೆದಿದ್ದಾರೆ.



# ೧೭ ಮಂಗಲಾ

ಸರ್ವ ಮಂಗಲಾ ಸರ್ವರಿಗೆ ಮಂಗಲಾ ॥ ಪಲ್ಲವಿ ॥

೧

ನಮ್ಮ ಸೀಮಿಗೇ ಸೀಮಿ ಇಲ್ಲಾ ಇದು ನಿಃಸೀಮಾ
ಯಾಕಽ ಉಲ್ಲಂಘನಾ ? ಭೂಮಾ ಭೂಮಾ !

೨

ಚರಮಾ, ಪರಮಾ, ಅಂತರ್ಯಾಮಾ
ಲೋಕೈಕ ಧಾಮಾ.

೩

ಅಮೃತಕ್ಕ ಇಲ್ಲಾ ವಿರಾಮಾ
ಒಳಹೊರಗ ಒಂದೇ ಉಸಿರು, ಒಂದೇ ನಾಮಾ.

- ರಚನೆ : ೧೯೭೫

---

ಭಾವ : ದಶಾವತಾರದ ಮುಕ್ತಾಯದ ಮಂಗಲ ಪದ್ಯ. ನಾಮಧ್ಯಾನದಿಂದ ಅಮೃತಾನುಭವ ಪಡೆಯಲು ಸಾಧ್ಯ ಎಂಬ ಸೂಚನೆ ಇದೆ.



## ಕವನಗಳ ಭಾವ-ಅವಿರ್ಭಾವ

ಡಾ|| ದ. ರಾ. ಬೇಂದ್ರೆಯವರ ೧೧೯ನೇ ವಾರ್ಷಿಕ ಜನ್ಮದಿನೋತ್ಸವದ ನಿಮಿತ್ತವಾಗಿ ಅವರ ಸದ್ಗುರುಗಳಾದ ಪ. ಪೂ. ಶ್ರೀ ಅರವಿಂದ ಹಾಗೂ ಶ್ರೀಮಾತಾ ಅವರಿಗೆ ಗೀತ ಪುಷ್ಪಗಳನ್ನು ಇಲ್ಲಿ ಅರ್ಪಿಸಲಾಗಿದೆ. ಈ ಕವನ ಸಂಕಲನಕ್ಕಾಗಿ ಆಯ್ಕೆ ಮಾಡಿರುವ ಹದಿನೇಳು ಕವನಗಳ ಭಾವ-ಅವಿರ್ಭಾವ ಈ ಅನುಬಂಧದಲ್ಲಿ ನೀಡಲಾಗಿದೆ.

### ೧. ಸ್ವಾತಂತ್ರದೇವಿಗೆ :

ಸ್ವಾತಂತ್ರ್ಯದ ಹುಟ್ಟು ಹಬ್ಬ ಎಂಬ ಗೀತ. ಶ್ರೀ ಅರವಿಂದರ ಜನ್ಮ ದಿನ ೧೫-೮-೧೮೭೨. ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ದಿನವೂ ೧೫-೮-೧೯೪೭. ಶ್ರೀ ಅರವಿಂದರು ಭಾರತ ಭಕ್ತಿಯಿಂದ ಮಾಡಿದ ಅನೇಕ ವರ್ಷದ ತಪದ ಪೂರ್ಣ ಫಲ ಇದು. ಆದುದರಿಂದ ಇದು ನಮ್ಮ ಭಾರತದ ಹುಣ್ಣಿವೆ ಎಂದು ಬೇಂದ್ರೆ ಹಾಡಿ ತೃಪ್ತಿ ಪಡೆದರು. ಭಾರತ ಹುಣ್ಣಿವೆ ಎಂಬ ಬೆಳುದಿಂಗಳ ರಾತ್ರಿ ಮುಗಿದು ಮಾಘವದ್ಯ ಪ್ರತಿಪದೆ ಪ್ರಾರಂಭಿಸಿದರೆ - ದ. ರಾ. ಬೇಂದ್ರೆಯವರ ಜನ್ಮದಿನ. ಹೀಗಾಗಿ ಭಾರತಕ್ಕೆ ಸಿಕ್ಕ ಸ್ವಾತಂತ್ರ್ಯ- ಗುರು-ಶಿಷ್ಯರ ಪೂರ್ವ ಜನ್ಮದ ಬಾಂಧವ್ಯ ಸಂಬಂಧ ಗೀತವೂ ಆಗಿದೆ.

### ೨. ಶ್ರೀಮಾತೃಶ್ರೀಗೆ :

ಪಂಚಜ್ಞಾನೇಂದ್ರಿಯಗಳಲ್ಲಿ ಕಣ್ಣು ಮತ್ತು ಕಿವಿಗೆ ಅತ್ಯಂತ ಮಹತ್ತ್ವ ಜಾತಕ ಪಕ್ಷಿ ಕಣ್ಣಿನಿಂದ ಬೆಳುದಿಂಗಳ ಕುಡಿಯುತ್ತದೆ ಎಂಬುದು ಕವಿ ಸಮಯ. ತಾಯಿಯ ಕಣ್ಣಿನಲ್ಲಿ ವಾತ್ಸಲ್ಯದ ಬೆಳುದಿಂಗಳ ಹಬ್ಬಿರುತ್ತದೆ. ತಾಯಿ ಮಗುವನ್ನು ಕಣ್ಣಿನಿಂದಲೇ ಮಾತನಾಡಿಸುತ್ತಾಳೆ. ಮಗು ಕೂಡ ಮಾತೃಭಾವವನ್ನು ಕಣ್ಣಿನಿಂದಲೆ ಕುಡಿಯುತ್ತದೆ. ಇದರಲ್ಲಿ ತಂದೆಯ ಕಣ್ಣುಗಳ ಆನಂದಭಾವದ ಸೇರ್ಪಡೆ ಆಗಾಗ ಆಗುವದುಂಟು. ತಂದೆಯ ಎರಡು ಕಣ್ಣು; ತಾಯಿ ಎರಡು ಕಣ್ಣು; ಮಗುವಿನ ಎರಡು ಕಣ್ಣು ಒಟ್ಟೂ ಆರೂ ಕಣ್ಣು ಆನಂದ ಸಾಗರದಲ್ಲಿ ತೇಲಾಡುವಾಗ - ಆ ಆನಂದ ಇಂದ್ರಲೋಕದ ವೈಭವಕ್ಕೂ ಮಿಗಿಲು ಎಂದಿದ್ದಾರೆ ಅಂಬಿಕಾತನಯದತ್ತರು.

ಕಣ್ಣಿನ ಜ್ಞಾನ-ದರ್ಶನವಾದರೆ; ಕಿವಿಯ ಜ್ಞಾನ-ಶ್ರುತಿ. ಶ್ರುತಿ ಹಾಗೂ ದರ್ಶನ ಜ್ಞಾನದ ಸಾಮರಸ್ಯವಾದಾಗ ಕವಿ ತನ್ನ ಕಾವ್ಯ ಸೃಷ್ಟಿಯ ಶಿಖರವನ್ನು

ತಲಪುತ್ತಾನೆ. ಇದೇ ಕಾವ್ಯ ಜೀವನದ ಸಾರ್ಥಕತೆ "ಕೇಳಿ ನುಡಿ, ಕಂಡು ನಡೆ ಓ ಕನ್ನಡ ಕಂದ" ಎಂಬುದು ಬೇಂದ್ರೆ ಕಾವ್ಯದ ವಿಶ್ವ ಸಂದೇಶ. ಇಂಥ ಅನುಭಾವ ಪಡೆದ ಬೇಂದ್ರೆಯವರು ಕೃತಜ್ಞತೆಯಿಂದ ಶ್ರೀಮಾತೆಯವರಿಗೆ ನಮನ ಸಲ್ಲಿಸಿದ ಭಾವಗೀತ ಇದು.

೩. ಬರುವಳು-ಬರುವಳು :

ನಸುಕಿನಲ್ಲಿ ಶ್ರೀಮಾತೆ ಆಶ್ರಮವಾಸಿಗಳಿಗೆ ದರ್ಶನ ಕೊಡುವ ಪರಿಪಾಠ ಇತ್ತು. ಇದು ಬಾಲ್ಕನಿ ದರ್ಶನ. ತನ್ಮೂಲಕ ಸಾಧಕರು ಬ್ರಾಹ್ಮೀ ಮುಹೂರ್ತಕ್ಕೆ ಎಚ್ಚರಾಗುವುದಕ್ಕೆ ಪೂರ್ವ ಪೀಠಿಕೆ ಇದು. ಈ ದರ್ಶನಕ್ಕೆ ಆಶ್ರಮದ ಸಾಧಕರೊಬ್ಬರು ಸಾಕಿದ ಕತ್ತೆ ಕೂಡ ಸರಿಯಾದ ಸಮಯಕ್ಕೆ ಬಂದು ಶ್ರೀಮಾತಾ ದರ್ಶನ ಪಡೆಯುತ್ತಿತ್ತು. ಇದು ನಿದ್ರೆ ಬಡಕರಿಗೆ ಚಾಟಿ ಏಟು.

ಸಾಧಕನು ದರ್ಶನದ ಪ್ರತೀಕ್ಷೆಯಲ್ಲಿರಬೇಕು. ಶ್ರೀಮಾತೆಯವರು ದರ್ಶನದಿಂದ ವಾತ್ಸಲ್ಯ ದೀಕ್ಷೆಯ ಪ್ರದಾನ ಮಾಡುತ್ತಿದ್ದರು. ಗುರು-ಶಿಷ್ಯರ ಕಣ್ಣು-ಕಣ್ಣು ಕೂಡಿದಾಗ ಅಂತರಂಗದಾ ಮೃದಂಗಾ ನುಡಿಯುವುದು ಅನುಭಾವ. ಅಂಥ ಅನುಭಾವ ಪಡೆದ ಬೇಂದ್ರೆ, ದರ್ಶನದ ನಿರೀಕ್ಷೆಯಲ್ಲಿದ್ದಾಗ, ಪ್ರದೀಪ್ತವಾದ ಭಾವದ ಗೀತ ಚಿತ್ರ ಇದು.

ಶ್ರೀಮಾತೆಯವರು ಪ್ರಾತಃಕಾಲ ಬಾಲ್ಕನಿ ದರ್ಶನ, ಮಧ್ಯಾಹ್ನ ಕಿಟಕಿಯೊಳಗಿಂದ ಯೋಗಿ ಶ್ರೀ ಅರವಿಂದರ ಸಮಾಧಿ ದರ್ಶನ, ಸಾಯಂಕಾಲ ಆಟದ ಬಯಲಿನಲ್ಲಿ ಬ್ಯಾಡಮಿಂಟನ್ ಆಡುವ ದರ್ಶನ, ಅನಂತರ ಧ್ಯಾನದ ಬಯಲಿನಲ್ಲಿ ಧ್ಯಾನ ದರ್ಶನ ಕೊಡುವ ಪರಿಪಾಠವಿತ್ತು. ಇದನ್ನು ಬಲ್ಲ ಸಾಧಕರು. ಸಂದರ್ಶಕರು ದರ್ಶನ ಪಡೆಯುವ ಅಭೀಪ್ಸೆಯಿಂದ 'ಬರುವಳು ಬರುವಳು ಶ್ರೀಮಾತೆ' ಎಂದು ಸ್ಮರಿಸುತ್ತ ಆ, ಆ ಸ್ಥಳಗಳನ್ನು ತಲುಪಿ ಪ್ರತೀಕ್ಷೆಯಲ್ಲಿ ಕೂಡುವ ದೃಶ್ಯವೇ ಶ್ರೀಮಾತಾ ಯೋಗ ಶಕ್ತಿಯ ಪ್ರತೀಕವಾಗಿತ್ತು.

೪. ದಿ ಮದರ್ :

ತಾಯಿಯ ಮೊಲೆಹಾಲಿನಲ್ಲಿ ಅಮೃತದಂಥ ಸಾಮರ್ಥ್ಯವಿದೆ. ಮಗುವಿಗೆ ಮೊಲೆ ಹಾಲಿನಿಂದ ಸಂಸ್ಕೃತಿ ಹರಿದು ಬರುತ್ತದೆ. ಅಮರತ್ವದ ಮಹತಿಯನ್ನು ಮಹಾಭಾರತದಲ್ಲಿಯ ಸಾವಿತ್ರಿ ಕಥೆಯ ಉಪಾಖ್ಯಾನ ಸಾರುತ್ತದೆ. ಈ ಚಿಕ್ಕ ಉಪಖ್ಯಾನವನ್ನು ಆಧರಿಸಿ ಇಪ್ಪತ್ತನಾಕು ಸಾವಿರ ಸಾಲಿನ ಬೃಹತ್

ಮಹಾಕಾವ್ಯವನ್ನು ಶ್ರೀ ಅರವಿಂದರು ಸೃಷ್ಟಿಸಿದರು. ಈ ಮಹಾಕಾವ್ಯದ ನಾಯಕನಾದ ಅಶ್ವಪತಿ ಎಂದರೆ ಶ್ರೀ ಅರವಿಂದರೆ. ಆದುದರಿಂದ ಸಾವಿತ್ರಿಯ ಶಕ್ತಿ ಸಂಪನ್ನತೆ ಶ್ರೀಮಾತೆಯವರದು.ಸೂರ್ಯಾ-ಸಾವಿತ್ರಿಯ ವಿಷಯ ವೇದವಾಙ್ಮಯದಲ್ಲಿ ಉಪಲಬ್ಧ. ಸಾವನ್ನು ಮೀರುವುದು ಅಸಾಧ್ಯ. ಸಾವಿರದ (ಸಾವು+ಇರದ) ಮನೆಗಳಲ್ಲಿ - ಸಾವಿನ ಬಗ್ಗೆ ಚಿಂತನೆಯನ್ನೇ ಮಾಡದ ಮನೆಗಳಲ್ಲಿ 'ಮುಕ್ತಿ' ವಾಸ ಮಾಡುತ್ತದೆ. ಇಂಥ ಮುಕ್ತ ಅವಸ್ಥೆಯನ್ನು ಶ್ರೀಮಾತೆಯ ದಿವ್ಯ ಶಕ್ತಿ ದಯಪಾಲಿಸುತ್ತದೆ ಎಂಬ ಭಾವವನ್ನು ಶ್ರೀ ಅರವಿಂದರು ''ಮಾತೃಶಕ್ತಿಯ ಕೃಪೆಯಿಂದ ಎಲ್ಲವೂ ಸಾಧಿಸಲಾಗುತ್ತದೆ'' ಎಂದು ಸೂಚಿಸಿದ್ದಾರೆ.

### ೫. ಶ್ರೀ ತಾಯಿಗೆ :

ತಾಯಿ ಮತ್ತು ಮಗುವಿನ ಸಂಬಂಧ - ಆಕಾಶದಲ್ಲಿ ಹಾರುವ ಹಕ್ಕಿ ಹಾಗೂ ಅದರ ಮರಿಗೆ ಸಮನಾದುದು. ಇಬ್ಬರಲ್ಲಿ ಎಷ್ಟೇ ಅಂತರವಿದ್ದರೂ ಭಾವದಿಂದ ಸಾಮಿಪ್ಯ ಇದ್ದೇ ಇರುತ್ತದೆ. ತಾಯಿಯ ಗರಿಗಳ ಸ್ಪರ್ಶ ಮರಿಗೆ ಅತ್ಯಾನಂದ ಕೊಡುತ್ತದೆ. ಅದನ್ನೆಲ್ಲ ಸ್ಮರಿಸಿಕೊಂಡು ಮರಿ ತನ್ನ ಹಕ್ಕನ್ನು ಸಾರುತ್ತದೆ. ಈ ಕವನದಲ್ಲಿಯ ವಾತ್ಸಲ್ಯದ ಭಾವ ಸ್ಪಷ್ಟವಾಗಿದೆ.

### ೬. ಲೋಕಾಲೋಕೇ :

''ಲೋಕಾಲೋಕೆ ಓಂ ತತ್ಸದಿತಿ'' ಶ್ರೀ ಮಾತಾ ಶ್ರೀ ಅರವಿಂದರ ಸ್ಮರಣೆಯೊಂದಿಗೆ ಸಲ್ಲಿಸಿದ ಪ್ರಾರ್ಥನಾ ಗೀತ. ದಿಲ್ಲಿಯಿಂದ ಮುಂಬೈಗೆ ಪ್ರವಾಸ ಮಾಡುವಾಗ ಉಗಿ ಬಂಡೆಯ ಚಕ್ರಗಳೆಲ್ಲ ಒಂದು ಮೇಳದಲ್ಲಿ ಮೊದಲಿನ ಎರಡು ಸಾಲು - ಲೋಕಾಕೋಕೇ ಓಂ ತತ್‌ಸದಿತಿ ಲೋಕಾಂತರ್ಗತ ಮಾತಾ ಅದಿತಿ - ಸ್ವರಗೂಡಿಸುತ್ತಿವೆ ಎಂದು ಬೇಂದ್ರೆ ಕಿವಿ ತುಂಬಿತು. ಗೌರೀಶಂಕರ ಶಿಖರಕ್ಕೆ ಯಾವುದೋ ಮರುತ್‌ಗಣ=ಗಾಳಿಯ ಗುಂಪು, ಜಡೆಗೂದಲು ಬಿಟ್ಟು ಕೌಪೀನಧಾರಿಯಾಗಿ ಕೈಯಲ್ಲಿ ಹಿಡಿದ ಶಲಾಕೆಗಳನ್ನು ಬಾರಿಸುತ್ತ ಲಗ್ಗೆಯಾಡುತ್ತಿವೆ ಎಂಬ ಧೃಶ್ಯ ಬೇಂದ್ರೆ ಕಣ್ಣು ತುಂಬಿತು. ಈ ದರ್ಶನ, ಆಶ್ರುತಿ ಕೂಡಿ, ಅದೇ ಆವೇಶದಲ್ಲಿ ಪ್ರಾರ್ಥನೆ ಹೊರಹೊಮ್ಮಿದ ಪ್ರಸಂಗ ಇದು. ಋಷಿ ಕವಿ ಮತ್ತು ಶ್ರುತ ಋಷಿ ಭಾವದಿಂದ ಸರಸತಿಯನ್ನು ಕುರಿತು ಹಾಡಿದ ಗೀತ ಇದು.

''ಮಾದಿನೀ । ವಾಜಿನೀ । ಜೀವಾಜಿ ನೀ । ವಾಜಿನೀವತೀ । ಸರಸ್ವತೀ ।

ಹಂಸೀ.....ಅದಿತೀ। ಸಂವದತೀ॥ ಎಂಬ ಹಲವಾರು ನಾಮಗಳಿಂದ ಸರಸ್ವತಿಯ ಉಪಾಸನೆ ಸಾಗುತ್ತ ಬಂದಿದೆ. ಅದರಲ್ಲಿ ಅತ್ಯಂತ ಮಹತ್ತ್ವದ ನಾಮ - ಅದಿತೀ 'ಅದಿತಿರ್ಮಾತಾ' ಹಾಗೂ ''ಅದಿತಿಃ ಪಂಚ ಜನಾಃ'' ಎಂದು ಋಗ್ವೇದ ಉಲ್ಲೇಖ. ಆ ಭಾವನೆಯ ಸಗುಣ ಸಾಕಾರ ವರ್ಣನೆ.

೭. ಓ ತಾಯಿ-ಮಾಯಿ :

ಮಾಯಿ. ಮಮತೆ ಮಾತೆಯ ಹುಟ್ಟುಗುಣ. ಪಾಂಡಿಚೆರಿಯ ಶ್ರೀಮಾತೆ ಹಾಗೂ ಬೇಂದ್ರೆಯವರಿಗೆ ಜನ್ಮಕೊಟ್ಟ ತಾಯಿ-ಅಂಬಿಕೆ-ಪಾರ್ವತಿ ಇವರಲ್ಲಿ ಬಿಂಬ-ಪ್ರತಿಬಿಂಬ ಭಾವ ಇರುವುದನ್ನು ಇಲ್ಲಿ ಅಭಿವ್ಯಕ್ತಪಡಿಸಲಾಗಿದೆ. ತಾಯಿಗೆ ಮಗುವಿನ ಸಾಮಿಪ್ಯ ಎಂದೆಂದಿಗೂ ಬೇಕೇಬೇಕು. ಪರಸ್ಪರರನ್ನು ಬಿಟ್ಟು ಒಬ್ಬಂಟಿಗರಾಗಿ ಇರುವುದು ಕಷ್ಟ. ಮಗುವಿನ ರಕ್ಷಕ ಶಕ್ತಿಯೇ ತಾಯಿ. ಶಿವಜಾಯಿ ಎಂದರೆ ಅಂಬಾಬಾಯಿ. ಇವಳು ಶಿವಾಜಿ ಮಹಾರಾಜರ ರಕ್ಷಕಶಕ್ತಿ. ನಾಯಿ ಅತ್ಯಂತ ಪ್ರಾಮಾಣಿಕ ಪ್ರಾಣಿ. ಯಜಮಾನನಿಗೆ ನಾಯಿಯ ಮೇಲೆ ವಿಶ್ವಾಸ; ನಾಯಿಗೂ ಯಜಮಾನನ ಮೇಲೆ ವಿಶ್ವಾಸ. ಪರಸ್ಪರ ವಿಶ್ವಾಸವೇ ಮುಖ್ಯ. ತಾಯಿ ಮಗುವಿಗೆ ಕೈ ತುತ್ತು ಉಣಿಸುವಾಗಿನ ಒಲವು, ಪ್ರೇಮ ಅನನ್ಯವಾದುದು. ಇಬ್ಬರ ಕಣ್ಣು ಮಾತನಾಡುತ್ತವೆ. ತಾಯಿಯ ಒಲವನ್ನು ಬಾಯಿ ತುಂಬ ಹೊಗಳಿದ ಪದ್ಯ ಇದಾಗಿದೆ.

೮. ಹೋಗೋಬಾರೋ ಮಾಡಬ್ಯಾಡಾ :

ದೇಹದಲ್ಲಿ ಒಳಹೊರಗೆ ಓಡಾಡುವ ಶ್ವಾಸ ಜೀವಂತಿಕೆಯ ಲಕ್ಷಣ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ವಾಯುಗಳು ದೇಹವನ್ನು ವ್ಯಾಪಿಸಿರುತ್ತವೆ. ಈ ಪಂಚಪ್ರಾಣಗಳ ಆರೋಗ್ಯ ಸರಿ ಇರುವುದು ಅವಶ್ಯ. ಈ ಐದೂ ವಾಯುಗಳ ಸಂಚಾರ ಸರಿ ಇದ್ದದ್ದಾದರೆ ಮನುಷ್ಯನಿಗೆ ಹಿಗ್ಗು=ಆನಂದ ಸಾಧ್ಯ.

ಮಂತ್ರ ಪಠನ ಹಾಗೂ ಓಂಕಾರ ಸಾಧನೆಯಲ್ಲಿ ವಾಯುವಿಗೆ ಮಹತ್ತ್ವವಿದೆ. ಶ್ರೀ ಅರವಿಂದ ಹಾಗೂ ಶ್ರೀಮಾತಾ - ಇವು ಮಂತ್ರಾಕ್ಷರಗಳು. 'ಶ್ರೀ ಅರವಿಂದೋ' ಎಂಬ ಮಂತ್ರ ಪಠನಕ್ಕೆ ಫಲ - ಅರಳುವಿಕೆ. ಇದರಂತೆಯೇ 'ಶ್ರೀಮಾತಾ' ಎಂಬುದು ಕೂಡ ಮಹಾಮಂತ್ರ. ಇದರ ಸಾಧನೆಯಿಂದ ಆದಾನ-ಪ್ರದಾನದಿಂದ ಸಂತೃಪ್ತಿ ಸಾಧ್ಯ ಎಂಬ ಸೂಚನೆ ಇಲ್ಲಿ ಕೊಡಲಾಗಿದೆ. ನಾಮಸ್ಮರಣೆಯ ಸಾಧನೆ ಅತ್ಯಂತ ಪ್ರಾಚೀನ. ಶ್ರೀಮಾತಾ

ಇದರ ಸಂಖ್ಯಾ ಸಂಕೇತ - ೨+೫+೬=೧೩=೧+೩=೪. ಶ್ರೀ ಅರವಿಂದೋ ಇದರ ಸಂಖ್ಯಾ ಸಂಕೇತ- ೨+೧+೨+೪+೦+೮=೧೭=೧+೭=೮. ೪ ಹಾಗೂ ೮ ಇವು ದಿಕ್ ವಾಚಕ. ಎಲ್ಲ ಕಡೆಯಿಂದ, ಎಲ್ಲ ಬಗೆಯಿಂದ ರಕ್ಷಣೆ ಮಾಡುವ ಶಕ್ತಿ-ಶ್ರೀಮಾತಾ ಹಾಗೂ ಶ್ರೀ ಅರವಿಂದೋ ನಾಮದ ಮಹಿಮೆ.

### ೯. ಶ್ರೀ ಅರವಿಂದರಿಗೆ :

ಈ ಕವನದಲ್ಲಿ ಶ್ರೀ ಅರವಿಂದರ ಸಗುಣ ರೂಪದ ವರ್ಣನೆ ಇದೆ. ಹುಬ್ಬು ಗರುಡನಂತಿವೆ. ಕಣ್ಣಿನ ಎವೆ ಜೇನಿನ ಹುಟ್ಟನಂತಿದೆ. ಅಂತರಂಗದಲ್ಲಿ ವಿಶ್ವವನ್ನೇ ಅರಳಿಸುವ ಸಾಮರ್ಥ್ಯವಿದೆ. ಬೇಂದ್ರೆಯವರು ಶ್ರೀ ಅರವಿಂದರಲ್ಲಿ - ತಂದೆ ಹಾಗೂ ತಾಯಿ ಎಂಬ ಎರಡೂ ಭಾವಗಳ ಐಕ್ಯವನ್ನು ಕಾಣುತ್ತಾರೆ. ಸದ್ಗುರುಗಳನ್ನು ತಾಯಿಗೆ ಹೋಲಿಸುವುದು ಸಾಮಾನ್ಯ. ಇದೇ ಗುರುಶಕ್ತಿಯ ಮಹತಿ.

### ೧೦. ಅರವಿಂದನಾಭನ ಪಾರಾದವಿಂದಕೆ :

ಶ್ರೀ ಅರವಿಂದರ ಸಂಕೇತ ಚಿಹ್ನದಲ್ಲಿ ಒಂದು ಆರೋಹ ತ್ರಿಕೋನ - ಅಭೀಪ್ಸೆ - ಮೇಲ್ಮುಖ. ಇನ್ನೊಂದು ಅವರೋಹ ತ್ರಿಕೋನ - ಅವತರಣ. ಮಧ್ಯದಲ್ಲಿ ಚೌಕೋನಾಕೃತಿ. ಅದರಲ್ಲಿ ನೀರಿನ ತೆರೆಗಳು. ಮಧ್ಯದಲ್ಲಿ ಕಮಲ-ಕೆಂಪು ಕಮಲ ಅರಳಿದೆ. ಬ್ರಹ್ಮ ಕಮಲ. ಇದು ಬೇಂದ್ರೆಯವರಿಗೆ ಶ್ರೀ ಗುರು ಅರವಿಂದರ ಪಾದಾರವಿಂದಗಳ ದರ್ಶನ ಕೊಡುತ್ತದೆ. ಆಗ ಬೇಂದ್ರೆಯವರ ಕೈ-ಕಮಲ, ಕಣ್ಣು-ಕಮಲ, ಹೃದಯ ಕಮಲ, ಮುಖ ಕಮಲ ಧ್ಯಾನಮಗ್ನವಾಗಿ ಶ್ರೀ ಅರವಿಂದ ಸ್ಮರಣೆಯಲ್ಲಿ ತಲ್ಲೀನವಾಗುವ ಭಾವ ಈ ಗಾನದ ಮರ್ಮ.

### ೧೧. ಸದಾಶಿವಗೆ :

ಶ್ರೀ ಅರವಿಂದರು ೫-೧೨-೧೯೫೦ ರಂದು ಮಹಾಸಮಾಧಿ ಹೊಂದಿದರೂ ದೇಹದ ಕಾಂತಿ ಕುಂದಿರಲಿಲ್ಲ. ೮-೧೨-೧೯೫೦ ರಂದು ನಿರ್ವಾಣ ಹೊಂದಿದ ದೇಹವನ್ನು ಸ್ಥಾಪಿಸುವಾಗ ಶ್ರೀಮಾತೆಯವರು ಸಲ್ಲಿಸಿದ ಶ್ರದ್ಧಾಂಜಲಿ ಕವನ ಸದಾಶಿವಗೆ.

ಸಮಾಧಿಸ್ಥವಾದ ಗುರು ಶಕ್ತಿಗೆ ಅದರ ಕಾರ್ಯ ಮುಗಿಯುವವರೆಗೆ ವಿರಾಮವಿಲ್ಲ. ಶ್ರೀ ಅರವಿಂದ ಪ್ರಣೀತ ಪೂರ್ಣಯೋಗದ ಸಾಧಕರಿಗೆ ಪುನರ್ ಜನ್ಮ ಲಭಿಸಿದಾಗ ಅವರು ಹಳೆಯ ದೇಹ, ಹಳೆಯ ಮನ, ಹಳೆಯ ಬುದ್ಧಿ ಉಳ್ಳವರಾಗಿರಲಾರರು. ಕೇವಲ ಹೊಸ ಅಂಗಿ ತೊಟ್ಟ, ಪುನರ್ ಜನ್ಮ ಹೊಂದಿದ ಹಳೆಯ ಪರಂಪರೆಯ ಜನಾಂಗ ಶ್ರೀ ಅರವಿಂದರಿಗೆ ಅಪೇಕ್ಷಿತವಾಗಿರಲಿಲ್ಲ. ಹೊಸ ಜನ್ಮದಲ್ಲಿ ಎಲ್ಲವೂ ನವೋನವ. ಇವರಿಂದಲೇ ಹೊಸ ಕೃತಯುಗದ ಆರಂಭ. ಇದಕ್ಕಾಗಿಯೇ ಶ್ರೀ ಅರವಿಂದ ಹಾಗೂ ಶ್ರೀಮಾತೆಯವರ ಮಹಾ ತಪಸ್ಸು. ಪ.ಪೂ. ಶ್ರೀ ಅರವಿಂದರು ತಪಸ್ಸಿನಿಂದ ಏನೇನು ಪ್ರಾಪ್ತ ಮಾಡಿಕೊಂಡರೋ ಅದೆಲ್ಲವೂ ಆಶ್ರಮದ ಸಾಧಕರ ಸಂಪತ್ತಾಗಬೇಕು ಎಂಬ ಹಾರೈಕೆ ಶ್ರೀ ಮಾತೆಯವರದು. ಇದು ಕೃಪಾಪ್ರಸಾದದ ಗೀತ. ಇದಕ್ಕಾಗಿಯೇ ಶ್ರೀ ಅರವಿಂದರ ಮಹಾ ಸಮಾಧಿಗೆ ಹಣೆ ಹಚ್ಚಿ ಕಾಯಬೇಕು ಆಗ ಸಾಧಕನ ಕಷ್ಟ, ನಷ್ಟ, ಸಂಘರ್ಷ ಪರಿಹಾರವಾಗಬೇಕು. ಸಾಧಕರ ತಾಳ್ಮೆ ಬೆಳೆಯಬೇಕು ಎಂಬ ವರವನ್ನು ಸಾಧಕರಿಗಾಗಿ ಭಗವಂತನಲ್ಲಿ ಶ್ರೀ ಅರವಿಂದರು ಬೇಡಿಕೊಂಡಿದ್ದಾರೆ. ಭಗವಂತ ಆ ವರ ಕೊಟ್ಟಿದ್ದಾನೆ ಎಂಬುದರಲ್ಲಿ ನಿಷ್ಠೆ ಬೆಳೆಯುತ್ತ ಹೋಗಲಿ ಎಂಬ ಭಾವದ ಗೀತ ಇದು.

### ೧೨. ಬೆಳಕಿನ ಲಿಂಗ :

ಅಂಗಧಾರಿ ದೇಹ ಲಿಂಗಧಾರಿಯಾದಾಗ ಅದು ಬೆಳಕಾಗುತ್ತದೆ. ಅಂಗ ಹಾಗೂ ಲಿಂಗ ಒಂದರ್ಥದಲ್ಲಿ ಎರಡೂ ಜಡವೇ. ಅಂಗಧಾರಿ ಮಾತಾಡುತ್ತಾನೆ. ಲಿಂಗಧಾರಿ ಮಾತನಾಡುವದಿಲ್ಲ, ಮೌನಿ. ಮಾತು ಮತ್ತು ಮೌನ ಎರಡೂ ವಿಶಿಷ್ಟ ಶಕ್ತಿಗಳು. ಬೇಂದ್ರೆಯವರು ಮಾತು ಮತ್ತು ಮೌನದ ಸಾಧನೆ ಮಾಡಿದ ವ್ಯಕ್ತಿಗಳಾಗಿದ್ದರು. ಎರಡರ ಅಂತರಂಗದ ಶಕ್ತಿ ಜ್ಯೋತಿ!

### ೧೩. ಒಂದು ಹಲವು :

ಒಂದು ಮತ್ತು ಹಲವು ಎಂಬುದು ನಿಸರ್ಗದ ತತ್ತ್ವ. ಒಂದು ಗಿಡಕ್ಕೆ ಹಲವು ಫಲಗಳು; ಹಲವು ಫಲಗಳಲ್ಲಿ ಇರುವ ಬೀಜ ಒಂದೇ. ಬೀಜ ವೃಕ್ಷ ನ್ಯಾಯ ಚಿರಂತನ ಸತ್ಯ. ಒಬ್ಬ ವ್ಯಕ್ತಿ ಸಾಧನೆಯಿಂದ ದೇವತಾ ವಿಗ್ರಹದಂತೆ ಪೂಜೆಗೆ ಅರ್ಹನಾಗುತ್ತಾನೆ. ಇದೇ ಜೀವನದ ಸಾರ್ಥಕತೆ ಎಂಬ ಸಂದೇಶ ಈ ಕವನದಲ್ಲಿದೆ.

೧೪. ಪ್ರಾಣಪಕ್ಷಿ :

೧೯೫೬ ರಿಂದ ೧೯೮೧ ರ ವರೆಗೂ ಬೇಂದ್ರೆ, ಶ್ರೀ ಅರವಿಂದರ ಮಹಾಕಾವ್ಯ ಸಾವಿತ್ರಿಯ ಅನುವಾದ ಮಾಡುವ ಸಾಧನೆ ಮಾಡುತ್ತಿದ್ದರು. ಬೇಂದ್ರೆಯವರು *The Life Divine*ದಲ್ಲಿ ತರ್ಕ-*Logic*; ಯೋಗ ಗ್ರಂಥಗಳಲ್ಲಿ ಅಗಾಧ ಮಾಟ-*Magic* ಹಾಗೂ ಸಾವಿತ್ರಿ ಪಠನದಲ್ಲಿ ವೀಣೆಯ ತಂತಿಗಳ ಸುಶ್ರಾವ್ಯಗಾನ-*Music* ಅನುಭವಿಸುತ್ತಿದ್ದರು.

ಸಾವಿತ್ರಿಯ ಪಠನ ಹೇಗೆ ಮಾಡಬೇಕು ಎಂಬುದನ್ನು ಶ್ರೀಮಾತೆಯವರ ಮುಖದಿಂದ ಆಲಿಸಿದವರು ಭಾಗ್ಯವಂತರು. ಸಾವಿತ್ರಿಯ ಶ್ರುತಿ ಶ್ರೀ ಅರವಿಂದರಿಗೆ ಮನಸ್ಸಿನ ಆರೋಹದ ಶ್ರುತಿ ಶ್ರೀ ಅರವಿಂದರಿಗೆ ಮನಸ್ಸಿನ ಆರೋಹದ ವಿವಿಧ ನೆಲೆಗಳ ದರ್ಶನಕೊಟ್ಟು, ಕಾವ್ಯಗಂಗೆ ಅವತರಣ ಮಾಡುತ್ತಿದ್ದಳು. ಆ ನೆಲೆಗೆ ಏರದ ಪಠನ-ಗಿಡಕ್ಕೆ ಚಿಗುರು ಒಡೆಯದೆ, ಕಾಯಿ ಹಿಡಿಯದ, ತಂತಿ ನುಡಿಯದ ಸ್ಥಿತಿ. ಬೇಂದ್ರೆಯವರ 'ಅಭೀಪ್ಸೆ ಶ್ರೀ ಅರವಿಂದರಿಗಾದ ಶ್ರುತಿ ಸಾಗೂ ಕೃತಿಯ ಮಹಾಭಾಗ್ಯ.

೧೫. ಬೆಳಕು :

ಅಗ್ನಿ ಎಂಬುದು ಮಹಾ ತತ್ತ್ವ. ಈ ತತ್ತ್ವ ಮನುಷ್ಯನ ಕಣ್ಣಿನಲ್ಲಿ - ಕೋಪಭಾವ ತಾಳಿದಾಗ, ಪ್ರಜ್ವಲಿಸುತ್ತದೆ. ಅನಂತರ ಅದು ಮೂಗು ಮತ್ತು ನಾಲಿಗೆಗೂ ಹಬ್ಬುತ್ತದೆ. ಜಠರಾಗ್ನಿ ಮಾನವನ ಪಚನಶಕ್ತಿಗೆ ಸಂಬಂಧಿಸಿದ್ದು. ಇದು ಕಾಲಿಗೂ ತಲುಪಿ ದೇಶತ್ಯಾಗ ಮಾಡಲು ಹಚ್ಚಬಹುದು. ಇದೇ ಅಗ್ನಿ ಬೆಳಕಾದಾಗ ಮಾರ್ಗದರ್ಶಕ ಜ್ಯೋತಿಯಾಗುತ್ತದೆ. ಜ್ಞಾನಜ್ಯೋತಿಯ ಫಲ ಆನಂದ. ಆದುದರಿಂದ ಇಂಥ ಜ್ಯೋತಿಯ ಧ್ಯಾನದಿಂದ ಮಾನವ ಪ್ರಗತಿ ಸಾಧ್ಯವೆಂಬ ಸಂದೇಶ ಇಲ್ಲಿದೆ.

೧೬. ಸಹಸ್ರ ತಂತ್ರೀ ನಿಃಸ್ವನದಂತೆ :

ಸದ್ಗುರು ಶ್ರೀ ಅರವಿಂದರು ಬೇಂದ್ರೆಯವರ ಮೇಲೆ ಕೃಪಾವೃಷ್ಟಿ ಮಾಡಿದ ಅನನ್ಯ ಗೀತವಿದು. ಶ್ರೀ ಅರವಿಂದರ ಆಶೀರ್ವಚನವು ಶ್ರೀ ಮಾತೆಯವರ ಕರುಣಾ ಪ್ರಸಾದದಿಂದ ವಾಸುದೇವ-ಜೀವನದತ್ತ ಗಂಗಾವತರಣದಂತೆ ಇಳಿದು ಬರುತ್ತಿದ್ದ ದರ್ಶನ, ಭೂಕಂಡದ ಆಘಾತ ೨೮-೨-೧೯೫೬ನೆಯ ದಿವಸ ಮಹಾಶ್ರುತಿ; ಬೇಂದ್ರೆಯವರು ಬೆಂಗಳೂರತ್ತ ಪ್ರವಾಸ ಮಾಡುವಾಗ

ಎಲಹಂಕ ನಿಲ್ದಾಣದ ಬಳಿ ಮೂರ್ತಗೊಂಡು ಭಾವಗೀತವಾಯಿತು. ಅದೇ ಕಾಲಕ್ಕೆ ಗಾಡಿಯೊಳಗಿನ ಫ್ಯಾನ್‌ನಿಂದ ವೇದಮಂತ್ರ ಕೇಳಿಸುತ್ತಿದ್ದವು. ಬಂಗಾರದ ಹುಡಿ ಧಾರಾಕಾರವಾಗಿ ಸುರಿಯುತ್ತಿತ್ತು ಎಂಬುದನ್ನು ಬೇಂದ್ರೆಯವರ ಕವಿ ದೃಷ್ಟಿಗೆ ಕಂಡಿತು ಹಾಗೂ ಮಹಾಶ್ರುತಿಯ ಶ್ರವಣ-ಧಾರವಾಡದ ಶ್ರಾವಣದ ಕವಿಗಾಯಿತು. ಇದು ಬೇಂದ್ರೆಯವರೇ ಅವರ ಕೈಯಿಂದ ಬರೆದ ಭಾವ ಸಂಧರ್ಭ. ಈ ಕವನದ ಹೆಗ್ಗಳಿಕೆ ೧೯೮೨ರ *Mother India* ಸಂಚಿಕೆಯಲ್ಲಿ ಡಾ. ಕೆ. ಡಿ. ಸೆಟ್ನ ಪ್ರಕಟಿಸಿದ ವಿವರಗಳ ಮೂಲಕ ಬೆಳೆಯಿತು. ಶ್ರೀ ಅರವಿಂದರ ಅತಿಮಾನಸ-ಸುಪ್ರಮಾನಸದ ಸಾಕ್ಷಾತ್ಕಾರ-*Supramental Manifestation*-ಆಶ್ರಮದ ಹೊರಗಿನ-ಇಬ್ಬರು, ಮೂವರು, ನಾಲ್ವರು ಸಾಧಕರಿಗೆ ಆಯಿತು. ಅವರಲ್ಲಿ ದೃಷ್ಟಾರ ಕವಿ ಬೇಂದ್ರೆಯವರು ಒಬ್ಬರು ಎಂಬ ಮನ್ನಣೆ ಶಾಶ್ವತ ಅಭಿಮಾನದ ಸಂಗತಿಯಾಗಿದೆ - ಸಾಧಕರಿಗೆ. ಬೇಂದ್ರೆ ಇದು ಅರಿಯರು. ಅರಿತವರು ಭಾಗ್ಯವಂತರು.

## ೧೭. ಮಂಗಲಾ :

ಇದೊಂದು ಮಂಗಳ ಗೀತ. ಶ್ರೀ ಅರವಿಂದರಿಗೆ ವಾಸುದೇವ ಸಾಕ್ಷಾತ್ಕಾರವಾದ ಪ್ರಸಂಗ ಸಾಧಕರಿಗೆ ಪರಿಚಿತ. ಈ ವಾಸುದೇವನೆ-ವಿಷ್ಣು-ನಾರಾಯಣ-ಶ್ರೀ ಕೃಷ್ಣ. ಎಲ್ಲ ಕಾಲದ ಜನರು - ನರರು ಪ್ರತಿಯೊಬ್ಬರ ಹೃದಯಾರವಿಂದದಲ್ಲಿರುವ ನಾರಾಯಣನು ಸಕಲರಿಗೂ ಸಾಧನೆಯಲ್ಲಿ ಮಾರ್ಗದರ್ಶನ ಮಾಡುತ್ತಾನೆ. ಅದಕ್ಕಾಗಿ ಹತ್ತು ಅವತಾರ ಧರಿಸಿ ಮಾನವನ ಉದ್ಧಾರಕ್ಕಾಗಿ-ಸರ್ವರಿಗೂ ಮಂಗಲವಾಗಲಿ ಎಂದೇ ಹಾರೈಸುತ್ತಾನೆ. ಇದು ಸದ್ಗುರು ಶ್ರೀ ಅರವಿಂದರ ಶ್ರೀ ಮಾತೆಯವರ ಹಾರೈಕೆಯ ಆಶೀರ್ವಚನ ಎಂಬುದು ಬೇಂದ್ರೆ ರಚಿತ ದಶಾವತಾರ ಗೀತಗಳ ಮಂಗಲವಾಗಿಯೂ ಪ್ರತಿಧ್ವನಿಗೊಂಡಿದೆ. ಇದನ್ನು ಆಲಿಸುವ ಸಕಲರಿಗೂ ಒಳ್ಳೆಯದಾಗಲಿ ಎಂಬ ಶಕ್ತಿ ಈ ಗೀತದ್ದು.

## ಅನುಬಂಧ - ೨

# ಬೇಂದ್ರೆ ಜೀವನ-ಕಾವ್ಯ : ಶ್ರೀಮಾತಾರವಿಂದರ ಪ್ರೇರಣೆ

ವರಕವಿ ದ. ರಾ. ಬೇಂದ್ರೆ ಜೀವನ-ಕಾವ್ಯದಲ್ಲಿ ಮೇಲೆ ಶ್ರೀಮಾತಾರವಿಂದರ ಪ್ರೇರಣೆ ಹೇಗಿದೆ ಎಂಬುದರ ಒಂದು ಪಕ್ಷಿ ನೋಟವನ್ನು ಇಲ್ಲಿ ಸಾದರಪಡಿಸಲಾಗಿದೆ.

(೧) ಜ್ಞಾನ ರೂಪನೆ ನೀನು ಜ್ಞಾನ ಹುಟ್ಟಿಸು (ಸಂಕಲ್ಪ-೧೯೨೧)

(೨) ಮಾಡಿ, ಮಾಡಿಸುವವನೆ ಬಲವನೀಡು (ಸಂಕಲ್ಪ-೧೯೨೧)

(೩) ಹೊಚ್ಚಿ ಪ್ರೀತಿಯ ಸೆರಗ ಎತ್ತಿಕೋ ಎನ್ನ (ಅಭಯಯಾಚನೆ ೧೯೨೧)

(೪) ನಿನ್ನ ತೊಡೆಯಿರಲೆನಗೆ ಪವಡಿಸಲು ಆಡಿ (ಶಕ್ತಿ ೧೯೨೩)

ಮೊದಲಾದ ಪ್ರಾರ್ಥನೆಗಳನ್ನು ಸದ್ಗುರುಗಳಾದ ಶ್ರೀ ಅರವಿಂದ ಹಾಗೂ ಶ್ರೀ ಮಾತೆಯವರಲ್ಲಿ ಸಲ್ಲಿಸ ತೊಡಗಿದರು. ಗೆಳೆಯರ ಗುಂಪು ಕಟ್ಟುವಾಗ ೧೯೨೦ರಲ್ಲಿ "ಲೀಲೆಯಲಿ ಯಾವುದೂ ವಿಫಲಮಲ್ಲ" ಎಂಬುದನ್ನು ಅನುಭವಿಸಿದರು. ೧೯೩೨ರಲ್ಲಿ ಪ್ರಕಟಗೊಂಡ 'ಗರಿ' ಕವನ ಸಂಗ್ರಹದಲ್ಲಿ ಈ ಎಲ್ಲ ಕವನಗಳ ಸೇರ್ಪಡೆ ಮಾಡಿದರು. 'ನಾದಲೀಲೆ', 'ಇಳಿದು ಬಾತಾಯಿ', 'ನಾನು' 'ಅಂಬಿಕಾತನಯದತ್ತ' ಮೊದಲಾದ ಪೂರ್ಣಯೋಗ ಸಾಧನಾ ಗೀತಗಳ ರಚನೆಗಳಿಂದ ಸ್ವಾನಂದ ಪಡೆಯತೊಡಗಿದರು. "ವಿಶ್ವದೊಳನುಡಿಯಾಗಿ ಕನ್ನಡಿಸುತಿಹನಿಲ್ಲಿ ಅಂಬಿಕಾತನಯನಿವನು" ಎಂಬ ಉಕ್ತಿಯಿಂದ ತನ್ನ ಈ ಜನ್ಮದ ಕಾರ್ಯವನ್ನು ಅರಿತುಕೊಂಡರು.

೧೯೫೦ರ ಅನಂತರದ ಕಾಲಾವಧಿಯಲ್ಲಿ ಬೇಂದ್ರೆಯವರು ಶ್ರೀ ಅರವಿಂದ ಶ್ರೀಮಾತಾ ಸಾಹಿತ್ಯವನ್ನು ಅಭ್ಯಸಿಸುವುದಕ್ಕೆ ಒಂದು ವಿಶಿಷ್ಟ ಮಾರ್ಗದ ಅನ್ವೇಷಣೆ ಮಾಡಿದರು. ಶ್ರೀ ಅರವಿಂದರ ಪೂರ್ಣಯೋಗದಂತೆ ತನ್ನ ಕಾವ್ಯ=ಕಾವ್ಯ+ಉತ್+ಯೋಗ; ನಾಟಕಗಳ

ರಚನೆ-ನಾಟ್ಯ ಯೋಗ; ಇನ್ನುಳಿದ ಕಥೆ, ಪ್ರಬಂಧ, ವಿಮರ್ಶೆ, ಉಪನ್ಯಾಸ, ಅನುವಾದ - ಜೀವನ ಯೋಗ ಎಂದು ಕಂಡುಕೊಂಡು ಓಂ-ಪ್ರಣವ ನಾದೋಪಾಸನೆಯನ್ನು ಹೊಸ ರೀತಿಯಲ್ಲಿ ಪ್ರಾರಂಭಿಸಿದರು. ಶ್ರೀ ಅರವಿಂದರ 'ಓಂ'ಕಾರ ವಿವೇಚನೆಯ ಪ್ರೇರಣೆಯಿಂದ ಬೇಂದ್ರೆ -

(೧) *AUM-Same as om (Showing the three syllables seperately; A - the spirit of the gross and external - virat=*ವಿರಾಟ್; *U=the spirit of the subtle and internal=*ತೈಜಸ; *M-the spirit of the secret super-conscient omnipotence=*ಪ್ರಾಜ್ಞ; *Om-the Absolute=*ತುರೀಯ ಎಂಬ ಶ್ರೀ ಅರವಿಂದ ಪ್ರೇರಣೆಯಿಂದ ಬೇಂದ್ರೆಯವರು




"I am you" ಎಂಬ ಸೂತ್ರ ನಿರ್ಮಿಸಿ, I wink and you (u) Link - ನಾನು ಕಣ್ಣಿನ ತೆರೆ ಮುಚ್ಚಾಟ ಮಾಡುವೆ; ನೀ ಸಂಬಂಧ ಸೂತ್ರದ ಕೃಪೆ ಮಾಡು ಎಂಬ ಪ್ರಾರ್ಥನೆ ಸಾಗಿಸಿದರು ಹಾಗೂ -

"ಕಲ್ಲಾದ ದೇವರು, ಮಣ್ಣಾದ ದೇವರು
ಬೂದ್ಯಾದ ದೇವರು ಹೋದರೋ
ಬಣ್ಣಾದ ದೇವರು, ಸುಣ್ಣಾದ ದೇವರು
ಕಣ್ಣಾದ ದೇವರು ಬಂದಾರೋ
ವರ ಬೇಡೋ, ವರ ಬೇಡೋ ಎಂದಾರೋ॥

- (ಎದೆಯ ಒಕ್ಕಲಿಗನ ಹಾಡು-ನಾಕು ತಂತಿ)

ಎಂಬ ಕಾವ್ಯೋಕ್ತಿ ಹೊರಹೊಮ್ಮಿತು -

All life is yoga of nature, seeking to manifest God within itself - ತನ್ನಲ್ಲಿದ್ದ ದೇವರನ್ನು ಪ್ರಕಟೀಕರಿಸುವ ಪ್ರಕೃತಿಯ ಯೋಗವು ಈ ಜೀವನವು ಎಂಬ ವ್ಯಾಖ್ಯೆಯನ್ನು ಆಧರಿಸಿ -

"ಹೊರಗಿನ ದೇವರು ಯಾಕಬೇಕು?
ಒಳಗಿನ ದೇವರ ಸಾಕಬೇಕು"

- (ಜೀವಲಹರಿ-೧೮)

ಎಂಬ ಪ್ರಜ್ಞೆಯಿಂದ "An eternal child playing an eternal game in eternal garden" ಶಾಶ್ವತವಾದ ಆನಂದದಲ್ಲಿ ಅನಂತಲೀಲೆಯನ್ನು ಆಡುವ ಸನತ್ಕುಮಾರನಲ್ಲಿ

"ಎಲೆ ಸನತ್ಕುಮಾರದೇವ।
ಎಲೆ ಸಾಹಸಿ ಚಿರಂಜೀವ।
ನಿದ್ದೆಗೊಮ್ಮೆ ನಿತ್ಯ ಮರಣ
ಎದ್ದ ಸಲ ನವೀನ ಜನನ
ನಮಗೆ ಏಕೆ ಬಾರದೋ?"

- (ಗರಿ-೫೪)

ಎಂಬ ಪ್ರಶ್ನೆ ಬೇಂದ್ರೆ ೧೯೩೨ರಲ್ಲಿ ಕೇಳಿದ್ದರು.

"ಉಸಿರಾಡು ಬಿಡು ನೀನು
ಹೆಸರಿರದೆ ಇರತಾನು
ನಮ್ಮರಿವಿನಲ್ಲೇ ಬರತಾನೋ
ನಮ್ಮನ್ನ ಹ್ಯಾಂಗಂವಾ ಮರತಾನೋ?
ಹ್ಯಾಂಗ ಮರತಾನೋ?

- (ಶ್ರೀಮಾತಾ-೨೫)

ಎಂಬಲ್ಲಿ ನವ ಸಮರ್ಪಣ ಶ್ರದ್ಧೆಯಿಂದ ೧೯೬೮ರಲ್ಲಿ ಬೇಂದ್ರೆ ಉತ್ತರ ಪಡೆದರು.

೧೯೩೪ ರಿಂದ ಬೇಂದ್ರೆಯವರು ಬಾಳಿನ ನಿಜವೇನು? ಎಂದು ಚಿಂತಿಸಿ, ಅದರ ಗುಟ್ಟನ್ನು ಶಬ್ದದಲ್ಲಿ ಹಿಡಿದಿಡಬೇಕು ಹಾಗೂ ಸಂಖ್ಯೆಯಿಂದ ಅಳೆದು ತೋರಿಸಬೇಕು ಎಂಬ ಸಾಧನೆಯನ್ನು ಸಾಗಿಸಿದರು. ೧೯೭೦ರ ಮಧ್ಯರಾತ್ರಿ ೧-೨೦ಕ್ಕೆ ಮಹಾರಾಷ್ಟ್ರದ ಸಿದ್ಧಟೇಕದ ಗಣಪತಿ ಅನೇಕ ಸಂಖ್ಯಾ ಕ್ರಮ ತೋರಿಸಿದರು. ಮೂಲ ಗುರು ಪ. ಪೂ. ಗೋಂದವಲೇಕರ-ಬ್ರಹ್ಮ ಚೈತನ್ಯರು ಸಂಖ್ಯಾ ಭಾಷೆಯಲ್ಲಿ ಮಾತನಾಡತೊಡಗಿದರು. ಆಗ ಋಗ್ವೇದ ಕಾಲದಿಂದ, ಶ್ರೀ ಅರವಿಂದ ಹಾಗೂ ಶ್ರೀಮಾತಾ ಮಾರ್ಗದಿಂದ ಆಧುನಿಕ ಸಕಲ ವಿಜ್ಞಾನಗಳಲ್ಲಿಯ ಸಂಖ್ಯೆಯ ಪರಿಭಾಷೆ ಬೇಂದ್ರೆಯವರನ್ನು ದಿವ್ಯ ಜೀವನದತ್ತ ಕೈ ಹಿಡಿದು ಕರೆದೊಯ್ಯತೊಡಗಿತು. ಬೇಂದ್ರೆಯವರಿಗೆ ದೇವ ಸಂಖ್ಯೆ=Prime Number ದ ಅಂತರಂಗ ಕಾಣತೊಡಗಿತು, ಪರಿಪೂರ್ಣ ಸಂಖ್ಯೆ=Perfect Number ಹೃದಯ ಹೊಳೆಯ ತೊಡಗಿತು.

ನನ್ನ ಆತ್ಮೀಯ ಸಹೋದರ ಡಾ॥ ಎಸ್. ಎಸ್. ಕುಲಕರ್ಣಿಯವರು Mother's Chronicles Book-3 ಯೊಳಗಿನ "Mira - The Occultist" ಎಂಬ ಪ್ರಕರಣ ನನಗೆ ಕಳಿಸಿಕೊಟ್ಟರು. ಈ ಗ್ರಂಥದ ಲೇಖಕರಾದ ಸುಜಾತಾ ನಹರ ಅವರು ಪಾಂಡಿಚೇರಿಯ ಶ್ರೀಮಾತೆಯವರ ೧೯೫೮ ರಿಂದ ೧೯೭೩ ರ ವರೆಗಿನ ಅವರಿಗಾದ ಆಧ್ಯಾತ್ಮಿಕ ಅನುಭವಗಳ

ನಿವೇದನೆಗಳನ್ನು ಆಧರಿಸಿ ರಚಿಸಿದ್ದಾರೆ. ಸಂಖ್ಯೆ ಮತ್ತು ಮಂತ್ರಗಳಿಗಿರುವ ಸಂಬಂಧವನ್ನು ಮಾತೆಯವರಿಗೆ Max Theon ಎಂಬ Occultist-ರಹಸ್ಯಶಾಸ್ತ್ರ ಗುರುವಿನ ಮೂಲಕ ತಿಳಿಯಿತು.

ಬೇಂದ್ರೆಯವರು ತಮ್ಮ ಜೀವನದ ಪ್ರಾರಂಭದಿಂದ ಜೀವನ ಅನುಭವ; ಸಾಧುಸಂತರ ಕಾವ್ಯ ಅನುಭಾವ Mysticism ಹಾಗೂ ಅನುಭಾವ ಬೋಧ ರಹಸ್ಯ Occultism ದ ಅಭ್ಯಾಸ ಸತತವಾಗಿ ಮಾಡಿದ್ದರಿಂದ ಶ್ರೀಮಾತೆಯವರಿಗೆ ಸಂಖ್ಯಾ ರಹಸ್ಯ ಸ್ಪಷ್ಟವಾಗುತ್ತ ಹೋದ ಕಾಲಕ್ಕೆ ಬೇಂದ್ರೆಯವರಿಗೂ ಧಾರವಾಡದಲ್ಲಿ ಆ ಕ್ರಿಯೆ ನಡೆದು-ವಿಷ್ಣು ಸಹಸ್ರ ಸಂಖ್ಯಾ ರಹಸ್ಯ, ಮೆಂಡೆಲೀಫ ಮೂಲ ದ್ರವ್ಯ ಕೋಷ್ಟಕ ರಹಸ್ಯ ತಿಳಿಯುತ್ತ ಹೋದದ್ದು ಶ್ರೀ ಅರವಿಂದರ ಮಹಾಕೃಪೆ. ಬೇಂದ್ರೆಯವರು ಶ್ರೀಮಾತೆಯವರ ದರ್ಶನಕ್ಕೆ ೧೯೬೮-೧೯೭೩ರ ಕಾಲಾವಧಿಯಲ್ಲಿ ಹೋದಾಗ - "Call The Poet Bendre" ಎಂದು ಕೂಗಲು ಸಾಧಕನಿಗೆ ಆಜ್ಞೆಕೊಟ್ಟರು. ಸಾಧಕ ಕೂಗಿದ. ಸಾಲಿನಲ್ಲಿ ಬಹಳ ಹಿಂದೆ ನಿಂತ ಬೇಂದ್ರೆ ಮುಂದೆ ಹೋಗಿ ಶ್ರೀಮಾತೆಯವರ ಕೃಪೆ ಪಡೆದದ್ದರ ಅರ್ಥ ನನಗೆ ಈಗ ಆಗುತ್ತಿದೆ.

(೧) Numbers were not mere digits and a mental toy, but carried profound meanings in themselves-ಸಂಖ್ಯೆಗಳೆಂದರೆ ಕೇವಲ ಅಂಕಿಗಳ ಮಾನಸಿಕ ಆಟವಲ್ಲ. ಅವು ಆಳವಾದ ಗಹನವಾದ ಆನಂದದ ಅರ್ಥಗಳ ಸತ್ತ್ವ ಉಳ್ಳವು ಆಗಿವೆ.

(೨) "In Sri Aurobindo's terminology overmind is the realm of the higher Gods. It was above, just above the realm of the Gods. It was there that the numbers took on a living meaning for me; not a mental game - a living meaning-ಶ್ರೀ ಅರವಿಂದರು ವಿವರಿಸುವ ಉತ್ತರೋತ್ತರ ಮನವು ದೇವತೆಗಳ ಸಾಮ್ರಾಜ್ಯ. ಅದನ್ನು ದಾಟಿದ ಮೇಲೆ ಕೇವಲ ಸಂಖ್ಯೆಗಳ ರಾಜ್ಯ. ಆ ಸಂಖ್ಯೆಗಳು ನನಗೆ ಜೀವಂತ ಅರ್ಥವನ್ನು ಬೋಧಿಸಿದವು. ಅದು ಮಾನಸಿಕ ಆಟವಲ್ಲ.

ಬೇಂದ್ರೆಯವರಿಗೆ ಇದರ ಅನುಭಾವ ಬೋಧ ೧೯-೭-೧೯೭೬, ೯-೮-೧೯೭೬ ಮತ್ತು ೧೦-೮-೧೯೭೬ ಎಂಬ ಮೂರೇ ದಿವಸಗಳಲ್ಲಿ ಆಯಿತು. ೧೬-೧-೧೯೭೮ ರಂದು ಕೊನೆಯ ೧೨ ಸಾಲು ರಚಿಸಿ ಬೇಂದ್ರೆಯವರು ಅವರ "ಬಾಲಬೋಧೆ" ಎಂಬ ಧ್ವನಿ ಕಾವ್ಯ ಶ್ರವಣವನ್ನು ಪ್ರಕಟಗೊಳಿಸಿದರು.

ಬೇಂದ್ರೆಯವರು ಶ್ರೀಅರವಿಂದರ ಸೌಂದರ್ಯ ಚತುರ್ಮುಖ ಸಿದ್ಧಾಂತ- (೧) ಐಂದ್ರಿಯಿಕ ಸೌಂದರ್ಯ (೨) ಕಾಲ್ಪನಿಕ ಸೌಂದರ್ಯ (೩) ಬೌದ್ಧಿಕ ಸೌಂದರ್ಯ (೪) ಆದರ್ಶ ಸೌಂದರ್ಯ (ಆರ್ಯ ಪುಟ-೬೨೭-೨೮) ದಿಂದ ಜೀವನಕ್ಕೆ ಚತುರ್ಮುಖತೆಯನ್ನು ಪಡೆದು ಕಾವ್ಯ+ಉತ್+ಯೋಗ ಸಾಧನೆ ಮಾಡುತ್ತ ಸಾಗಿದ್ದರು.

ಕೊನೆಯಲ್ಲಿ-ಶ್ರೀ ಅರವಿಂದರ ಚತುರ್ಮುಖ ಪುರುಷ ಪ್ರಜ್ಞಾ ಸಿದ್ಧಾಂತ ಬೇಂದ್ರೆ ಅರಿತುಕೊಂಡದ್ದು ಹೀಗೆ-

ಬ್ರಹ್ಮ ಪ್ರಜ್ಞಾ (ಬ್ರಹ್ಮ=ಗಣಪತಿ=ಓಂ)=೧=ಆತ್ಮ
ಈಶ್ವರ ಪ್ರಜ್ಞಾ (ಆರು ಮಗ್ಗಲುಗಳ ಅರಿವು)=೬=ಋತು
ವಿಶ್ವಪ್ರಜ್ಞಾ (ಯಜ್ಞ) ಇರವು=೧೨=ವರ್ಷ
ಆತ್ಮ ಪ್ರಜ್ಞಾ=ಅಷ್ಟಾವಧಾನ=೮=ದಿಕ್ಕು

೧+೬+೮+೧೨=೨೭. ಒಂದು ಎಂಬ ಆತ್ಮ ೨೬ ಸಂಗತಿಗಳಿಂದ ಪರಿವೇಷ್ಟಿಸಲ್ಪಟ್ಟು ಅಡಗಿ, ಗುಪ್ತವಾಗಿರುತ್ತದೆ. ಇದರ ಇರವು, ಅರಿವು, ಹರಿವು (Existence, Knowledge, Bliss) ಆದಾಗ-ಈ 'ಸೃಷ್ಟಿ ಭಗವತ್ ದೃಷ್ಟಿ', ; 'ಈಶಾ ವಾಸ್ಯಂ ಇದಂ ಸರ್ವಂ' ಚೇತನಕ್ಕೂ ಅಚೇತನಕ್ಕೂ ಆತ್ಮವಿದೆ', 'ಅಹಂ ಬ್ರಹ್ಮಾಸ್ಮಿ', ತತ್ ತ್ವಂ ಅಸಿ' ಮೊದಲಾದ ಎಲ್ಲವುಗಳ ಅರ್ಥವಾಗುತ್ತದೆ ಎಂಬುದನ್ನು ಬೇಂದ್ರೆ ಅನುಭವಿಸಿದರು, ಅದರಂತೆ ವಿವಿಧ ಕವನ ರಚಿಸಿದರು. ಅದರ ತಿಳುವಳಿಕೆಗಾಗಿ ಕಟ್ಟಿಗೆಯ ಉಪಕರಣ ಸೃಷ್ಟಿಸದರು. ಇದು ಎಲ್ಲರಿಗೂ ಕಾಣಸುತ್ತದೆ, ಸಾಧನೆಯಿಂದ ತಿಳಿಯುತ್ತದೆ ಎಂಬುದರಲ್ಲಿ ಬೇಂದ್ರೆಯವರಿಗೆ ಅಚಲವಾದ ವಿಶ್ವಾಸವಿತ್ತು. 'ಜಡ ಎಂಬುದು ಚೇತನದ ಒಂದು ರೂಪ, ಚೇತನದ ಆವಾಸಸ್ಥಾನ. ಇಲ್ಲಿ ಜಡದಲ್ಲಿಯೇ ಚೈನತ್ಯದ ಸಾಕ್ಷಾತ್ಕಾರ ಸಾಧ್ಯವಿದೆ' ಎಂಬ ಶ್ರೀ ಅರವಿಂದ ಉಕ್ತಿಯನ್ನು ಬೇಂದ್ರೆಯವರು ಈ ಕಟ್ಟಿಗೆಯ ಒಂದು ಘನದಿಂದ ವಿವರಿಸುತ್ತಿದ್ದರು. ಇಂಥ ಕಟ್ಟಿಗೆ ಘನವು ಜಡ, ಮನಷ್ಯನ ದೇಹವೂ ಜಡ. ಒಂದು ಸಾವಿರ ಕಟ್ಟಿಗೆಯ ಘನಗಳನ್ನು ಮಾಡಿಸಿ ವಿಷ್ಣು ಸಹಸ್ರನಾಮಗಳ ಅಂತರಾರ್ಥ ತಿಳಿದುಕೊಂಡು ಸಾವಿರದ ಆತ್ಮವಿದ್ಯೆ ಸಾಧನೆಯಲ್ಲಿಯೆ ಅವರಿದ್ದರು.

ಶ್ರೀ ಮಾತೆಯವರು ಕಂಡ ಸಂಖ್ಯೆಗಳಲ್ಲಿ ೧=ಸತ್ಯ; ೬=ನವಸೃಷ್ಟಿ; ೮=ಅನಂತ ; ೧೦=ಬಾಹ್ಯ ಅಭಿವ್ಯಕ್ತಿ ಹಾಗೂ ೧೨=ಸೃಷ್ಟಿಯ ಪರಿಪೂರ್ಣತೆ ಹಾಗೂ ಶ್ರೀ ಅರವಿಂದರ "All problems of life are problems of Harmony" ಎಂಬ ಉಕ್ತಿಯನ್ನು ಅರ್ಥಮಾಡಿಕೊಳ್ಳಲು ೧ ರಿಂದ ೧೦ ಸಂಖ್ಯೆಗಳನ್ನು=ಕೈ ಬೆರಳುಗಳನ್ನು ಜ್ಞಾನದ ಉಪಕರಣವಾಗಿ ಬೇಂದ್ರೆ ಕಂಡುಕೊಂಡಿದ್ದರು. ಅದರ ಕೆಲವು ಅಂಶ ಹೀಗಿವೆ :

೧+೨+೩=೬=ನವಸೃಷ್ಟಿ
೪+೫+೬+೭=೨೨=ಶ್ರುತಿ=ಸಾಮರಸ್ಯ
೮+೯=೧೭=ಜೀವನ ಕಲೆ. ಚಂದ್ರನ ಹಿಂದೆ ಅಡಗಿದ್ದ ಸೂರ್ಯ.
ಚಂದ್ರ=ಮನಸ್ಸು; ಸೂರ್ಯ=ಜ್ಞಾನ ಸೂರ್ಯ
೧೦=ಬಾಹ್ಯ ಅಭಿವ್ಯಕ್ತಿಗೆ ಬೇಕಾಗುವ ಆಂತರಿಕ ಪರಿಪೂರ್ಣ ಸ್ಥಿತಿ.
೭=ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ+ಸತ್+ಚಿತ್+ಆನಂದಗಳ ತಿಳುವಳಿಕೆ.

ಏಳು ಈ ಸಂಖ್ಯೆಯ ಅನೇಕ ರಹಸ್ಯಗಳನ್ನು ಬೇಂದ್ರೆ ಕಂಡು ಹಿಡಿದಿದ್ದರು. ಇದಕ್ಕೆ ಶ್ರೀ ಅರವಿಂದರ ಭಾಗವತ ಜೀವನ=ದಿವ್ಯ ಜೀವನ=The Life Divineದ ಸಪ್ತ ರಹಸ್ಯ ಅಧ್ಯಯನ ಪ್ರೇರಣೆ ಕೊಟ್ಟಿತ್ತು. "ಮೂರು ರಹಸ್ಯ ಸ್ವರ್ಗಗಳ ಕೆಳಗೆ ಏಳು ಅಮರ ಭೂಮಿಗಳಿವೆ" ಎಂಬ

ಸಾವಿತ್ರಿ ಮಹಾಕಾವ್ಯದ ಅರ್ಥ ತಿಳಿಸಲು ವರ್ತುಲದ ಉದಾಹರಣೆ ಉಪಯೋಗಿಸುತ್ತಿದ್ದರು. ಶ್ರೀ ಅರವಿಂದ ಅವರ "All Yoga is in its nature, a new birth" ಎಂಬ ಉಕ್ತಿ ಭಾರತದ ಭಕ್ತಿ ಮತ್ತು ಭಾರತ ಹಾಗೂ ಪಾಕಿಸ್ಥಾನದ ಐಕ್ಯ ಆಧರಿಸಿ, ನವಮಾನವೀಯತೆಯ ಆವಿರ್ಭಾವವನ್ನು ಪ್ರತಿಪಾದಿಸುವ ಅನೇಕ ಕವನ ಬೇಂದ್ರೆ ರಚಿಸಿದ್ದರು. ಅವುಗಳಲ್ಲಿ ಮರ್ಯಾದೆ ಕವನ ಸಂಗ್ರಹದ ಕವನ ೧೩ ಕೆಲವು ನುಡಿ ಹಾಗೂ ಚತುರೋಕ್ತಿ ಮತ್ತು ಇತರ ಕವನಗಳು ಸಂಗ್ರಹದ ಕವನ ೨೩ - ದತ್ತ ಉಗಾಭೋಗ ಹೀಗಿವೆ -

ಪೂರ್ವ-ಪಶ್ಚಿಮದಲ್ಲಿ ನಂಟು ಬೆಳೆದು
ಬಂದೀತು ನವಯುಗವು
ನವರೂಪ ತಳೆದು
ಜಯವಾಗತ್ತೈತೇ.
ನಾಡಾಡಿ ಬುಡಬುಡಿಕೆಯಲ್ಲ
ಇದು ದೇವವಾಣಿಯ ಒಡಂಬಡಿಕೆ

★ ★ ★ ★

ದೇಹದಲಿ ಅಡಗಿರುವ ದೆವ್ವವನು ಮೆಟ್ಟಿ
ದೇಹಲೀ ದೀಪದಲಿ ದೇವನನೆ ಮುಟ್ಟಿ
ನೀಡವ್ವಾ ದಿವ್ಯದೃಷ್ಟಿ
ಮಾನವ್ಯ ಬಾಂಧವ್ಯ
ಸದ್ಭಾವ ಸೃಷ್ಟಿ

★ ★ ★ ★

ಮಾತೇ!
ಜ್ಯೋತಿರ್ಲಿಂಗಜಾತೆ
ಸ್ವಾಂತಃಸುಖೀ
ಸಾವಿರದ ಸಾವಿರದ ಚೇತೋಮುಖಿ
ಅರವಿಂದ ನೇತ್ರೇ
ಅರವಿಂದ ಗಾತ್ರೇ
ಅರವಿಂದ ಪಾತ್ರೇ
ವಿಜ್ಞಾನ ಕ್ಷೇತ್ರದಲಿ ಎತ್ತು ತಲೆಯ
ಸಪ್ತರ್ಷಿ ಮಂಡಲದ
ಧ್ರುವದ ಕಲೆಯ.
ಖಂಡಖಂಡದೊಳೊಡೆದ ಓ ಸೋದರಾ!
ಹೊಗದಿರೋ ಆ ಪುರಾಣದ ಗವಿಗಳಾ
ಬೋಧಕರ ಶೋಧಕರ ದಿಗ್‌ಭ್ರಾಂತ ಛವಿಗಳಾ
ದೇವರನೆ ಕಾದಾಡಹಚ್ಚಿರುವ ಕವಿಗಳಾ
ದುಡ್ಡಿಗೂ ದುಡಿತಕ್ಕು ಇಂದು ಕಾದಾಟ
ಸ್ವಾರ್ಥಸಾಧಕವಾಗಿ ಕೌಟಿಲ್ಯ ರೀತಿ

★ ★ ★ ★

೬೨ ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು - ಸಂ. ವಾಮನ ಬೇಂದ್ರೆ

ಓ ಮಾನವಾ !! ಬಿಡು ದುರಭಿಮಾನವಾ

ಓ ದಾನವಾ !! ಕೊಡು ಹೃದಯ ದಾನವಾ

ಬಾಗಿಲಿಗೆ ಬಂದೆ

ಭಾರತಕೆ ಜಯವು

ಭಾರತಿಗೆ ಜಯವು

ದೇವ ವರ ತಂದೆ

ತೆರೆಮುಚ್ಚಿ ತೆರಳದಿರು ಹಳೆ ನರಕಕೆ

ತೆರೆ ಬಾಗಿಲನು, ಬಾರೊ ನವ ನಾಕಕೆ

ಶುಭಪಾಕಕೆ

## ೨) ದತ್ತ-ಉಗಾಭೋಗ

೧

ಒಮ್ಮೆ ಮೂನಾ! (Moon) ನೀನು ಸನ್ನಾಗಿ (Sun) ಬಾ

ಮತ್ತೆ ಒನ್ನಾಗಿ ಬಾ,

ಮತ್ತೆ ಚೆನ್ನಾಗಿ ಬಾ,

೨

ಮುನ್ನಾಗ-ಹಿನ್ನಾಗ,

ನನ್ನಾಗ-ನಿನ್ನಾಗ,

ಹೊನ್ನಾಗ-ನಾಗಾ!

೩

ಈಗಾ, ಆಗಾ, ಹೋಗಾ

ರಂಗಾ ಅಂಗಾಂಗ ಪೋಗಾ

ಸಾರಿಗಾ, ಯಾ, ರಾಗಾ?

ಓಹೋ ದತ್ತ-ಉಗಾಭೋಗ!

ಶ್ರೀ "ಅರವಿಂದರ ದತ್ತೂನಾ" ಎಂದು ಮರ್ಯಾದೆ ಕವನ ಸಂಗ್ರಹದಲ್ಲಿಯ 'ಓಂ ಸ್ವಸ್ತಿ-ಅನ್ನದಗತಿ' ಪದ್ಯದಲ್ಲಿ ಪ್ರಕಟಪಡಿಸಿದ ಬೇಂದ್ರೆಯವರ ಅರವಿಂದ ಭಕ್ತಿಯ ಕವನ ಹೀಗಿದೆ-

ಶ್ರೀಂ ಹರಿ ಓಂ ಹ್ರೀಂ ಹರ ಓಂ
ಕ್ಲೀಂ ಹರಿಹರ ಓಂ ಬ್ರಹ್ಮನ್
ದತ್ತದಿಗಂಬರ, ಚೈತ್ಯ ಚಿದಂಬರ
ಶ್ರೀ ಔದುಂಬರ
ಜಯ ನಿತ್ಯಾನಂದಾ।
ಜಯ ಪರ ಗೋವಿಂದಾ
ಜಯಜಯ ಮುಕುಂದಾ।

೨

ಅಥ ರಸಾನುಮಾತಾರವಿಂದಾ
ರಾಜಯೋಗಿನೀ। ಪೌರಮಂಡಲಾ
ಕ್ರಾಂತಪಾದನೇ।
ನಾನು ತಮ್ಮನು ಅಣ್ಣ ಸೇರುವೆ
ನೆಮ್ಮಿನೆನೆಸುವೆ.

೩

ಇರವಿರನವಿನಾ ಪರಿವು ಹಿಗ್ಗಲಿS
ಬೆಳಕಿಗಿಂತಾ ಬೆಳ್ಳಗಾಗಲಿS
ಪಾಂಡುರಂಗದಾ। ಸಿರಿಪುರಂದರ ವಿಟ್ಠಲಾ
ಮಹಿಯನಿಟ್ಟೆಡೆ ಮುಟ್ಟಮುಟ್ಟಲಾ

೪

ಓಂ ನಾದ ಬಿಂದು ಅರವಿಂದ ಘೋಷಾ।
ಪರಿಪೂರ್ಣವೇಷಾ। ಓಂ ವಾಸುಶೇಷಾ। ಸಂತೋಷಾ

-ಅಂಬಿಕಾತನಯದತ್ತರ ಅಪ್ರಕಟಿತ ಕವನ

ಬೇಂದ್ರೆ ಕುಟೀರ, ಹುಬ್ಬಳ್ಳಿ
೨೫-೨-೨೦೦೫
ವರಕವಿ ದ.ರಾ.ಬೇಂದ್ರೆ ೧೧೯ನೇ ವಾರ್ಷಿಕ ಜನ್ಮದಿನ.

ಡಾ॥ ವಾಮನ ಬೇಂದ್ರೆ,
ಸಹ ನಿರ್ದೇಶಕರು
ವರಕವಿ ಡಾ॥ ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಸಂಗೀತ ಅಕಾಡೆಮಿ

## ಅನುಬಂಧ -೩

## ವರಕವಿ ಡಾ|| ದ. ರಾ. ಬೇಂದ್ರೆ ಸಂಶೋಧನ ಸಂಸ್ಥೆ ಹಾಗೂ ಸಂಗೀತ ಅಕ್ಯಾಡೆಮಿಗಳ ಯೋಜನೆ-ಸಾಧನೆ : ಒಂದು ಪಕ್ಷಿ ನೋಟ

''ಡಾ|| ಬೇಂದ್ರೆಯವರ ಜೀವನ ಮತ್ತು ಅವರ ಸಾಹಿತ್ಯದ ಬಗ್ಗೆ ಪ್ರಸಕ್ತ ನಡೆದಿರುವ ಸಂಶೋಧನೆಯ ಬಗ್ಗೆ ಒಂದು ಪಕ್ಷಿನೋಟ''ವನ್ನು ಇಂದಿನ ರಸಿಕರಿಗೆ, ಬೇಂದ್ರೆ ಅಭಿಮಾನಿಗಳಿಗೆ ನೀಡುವ ಜವಾಬ್ದಾರಿ ನನ್ನದಾಗಿದೆ. ಈ ಕಾರ್ಯ ಎಷ್ಟೊಂದು ಗಹನವಾದದ್ದು ಎನ್ನುವ ಬಗ್ಗೆ ಒಂದು ಮಾತನ್ನು ಪ್ರಾಸ್ತಾವಿಕವಾಗಿ ಹೇಳ ಬಯಸುತ್ತೇನೆ. ''ವಿಶ್ವದೊಳನುಡಿಯಾಗಿ ಕನ್ನಡಿಸುತಿಹೆನಿಲ್ಲಿ ಅಂಬಿಕಾತನಯನಿವನು'' ಎಂದು ತಮ್ಮ ಕಾರ್ಯ ವೈಶಿಷ್ಟ್ಯ ಹಾಗೂ ವೈಶಾಲ್ಯತೆಯನ್ನು ಕುರಿತು ಗುರುವರ್ಯ ವರಕವಿ ಡಾ|| ದ. ರಾ. ಬೇಂದ್ರೆಯವರು ಹೇಳಿರುವುದು ಗಮನಾರ್ಹ. ವಿಶ್ವದ ಆಳ-ವಿಸ್ತಾರ-ಆಂತರ್ಯವನ್ನೇ ಕನ್ನಡಿಸಲು ಹೊರಟವರು ಅಂಬಿಕಾತನಯದತ್ತರು. ಇಡೀ ವಿಶ್ವದ ಒಳನುಡಿಯನ್ನು ಕನ್ನಡದಲ್ಲಿ ಕನ್ನಡಿಸುವ 'ಅಗಾಧ' ಕಾರ್ಯದಲ್ಲಿ ಆರು ದಶಕಗಳ ಕಾಲ ನಿರಂತರ ತೊಡಗಿದ ಈ ವರಕವಿ, ಮುನಿಕವಿ, ಭಾವ ಋಷಿ, ವೇದವಿತ್ ಕವಿ, ವಿಜ್ಞಾನವಿತ್ ಕವಿ ದ. ರಾ. ಬೇಂದ್ರೆಯವರು ಎಂಭತ್ತಾರು ವರುಷಗಳ ಜೀವನ ಹಾಗೂ ಅರವತ್ತೂರು ವರುಷಗಳ ಜ್ಞಾನ-ವಿಜ್ಞಾನ-ಸುಜ್ಞಾನ ಚಿಂತನೆ-ರಚನೆಗಳನ್ನು ಕುರಿತು ನಡೆದಿರುವ 'ಅಗಾಧ' ಸಂಶೋಧನೆಯನ್ನು ಕುರಿತು 'ಪಕ್ಷಿನೋಟ'ವನ್ನು ಕೊಡುವುದೆಂದರೆ, ವಿಶ್ವವನ್ನೇ ಅಂಗೈಯಲ್ಲಿ ತೋರುವ ಸಾಹಸ ಮಾಡಿದಂತೆ. ಈ 'ಅಗಾಧ' ಕಾರ್ಯವನ್ನು ಸಂಕ್ಷಿಪ್ತವಾಗಿ ನಿವೇದಿಸಬಯಸುತ್ತೇನೆ. ಹತ್ತು ಬೇಂದ್ರೆ ಸಮಗ್ರ ಸಂಶೋಧನೆಯ ಅಂತರಾಳ. 'ಹತ್ತು' ಪೂರ್ಣತ್ವದ ಸಂಕೇತ. ಒಂದು, ಎರಡು, ಮೂರು, ನಾಲ್ಕು ಕೂಡಿದರೆ ಹತ್ತು. ಒಂದೆಡೆ ಒಂದರಿಂದ ಆರು ಅಂಕಿಗಳನ್ನು ಗುಣಿಸಿ, ಇನ್ನೊಂದೆಡೆ ಎಂಟರಿಂದ ಹತ್ತು ಅಂಕಿಗಳನ್ನು

ಗುಣಿಸಿದಾಗ, ಈ ಎರಡರ ಫಲಿತಾಂಶವು ೭೨೦ ಎಂಬ ಸತ್ಯದ ಅರಿವಾಗುತ್ತದೆ. ನಡುವಿನ ೭ ರ ಮಹತ್ತು ಸ್ಫುರಿಸುತ್ತದೆ. ಏಳು ವಾರ, ಏಳು ಬಣ್ಣ, ಏಳು ಸ್ವರ. ಹಾಗೇ ಏಳಬೇಕು, ಏಳರಲ್ಲಿ ಎದ್ದು ಹತ್ತರ ಹಾದಿ ಹತ್ತಬೇಕು. ೭೨೦, ೩೬೦ ಹಗಲು ಹಾಗೂ ರಾತ್ರಿಗಳ ಒಟ್ಟುಗೂಡಿದ ಸಂಖ್ಯೆ. ಈ ಸೂತ್ರವನ್ನು ತಮ್ಮ ಹತ್ತು ಬೆರಳುಗಳನ್ನು ಜೋಡಿಸಿ, 'ನಮನ' ಎಂದು ಹೇಳಿ ಹತ್ತರ ಮಹತ್ತನ್ನು ಸಂಶೋಧಿಸಿದ ವರಕವಿ, ಮಹಾನ್ ವಿಜ್ಞಾನಿ ಡಾ|| ದ. ರಾ. ಬೇಂದ್ರೆ. ಹತ್ತರ ಮರ್ಮವನ್ನು ಕುರಿತು ಬೃಹತ್ ಸಂಗ್ರಹವನ್ನು ತರುವ ಗುರುತರ ಜವಾಬ್ದಾರಿ ಬೇಂದ್ರೆ ಸಂಶೋಧನ ಸಂಸ್ಥೆ ಯೋಜಿಸಿದೆ. ಅಂತೆಯೇ ಬೇಂದ್ರೆ ವೈಜ್ಞಾನಿಕ ಸಂಶೋಧನೆ, ಜೀವನ-ಸಾಹಿತ್ಯ-ಸಾಹಿತ್ಯ ಜೀವನಗಳ ಸಂಶೋಧನೆಯ ಪ್ರಚಲಿತ ಪ್ರಗತಿಯ ಅತಿ ಸಂಕ್ಷಿಪ್ತ ಪರಿಚಯವನ್ನು ಇಲ್ಲಿ ಮಾಡಿಕೊಡಬಯಸುತ್ತೇನೆ.

ದಿನಾಂಕ ೩೦ನೇ ಸೆಪ್ಟೆಂಬರ್ ೨೦೦೦ ದಂದು ಹುಬ್ಬಳ್ಳಿಯಲ್ಲಿ ಕರ್ನಾಟಕ ರಾಜ್ಯ ಸರಕಾರಿ ದಿನಗೂಲಿ ನೌಕರರ ಮಹಾಮಂಡಲ ನಿರ್ಮಿಸಿರುವ ಐತಿಹಾಸಿಕ ಆವರಣ "ವಿಶ್ರಮ ಚೇತನ" ದಲ್ಲಿ ಜ್ಞಾನಪೀಠ ಪ್ರಶಸ್ತಿ ವಿಜೇತ ವರಕವಿ ಡಾ|| ದ. ರಾ. ಬೇಂದ್ರೆ ಸಂಶೋಧನ ಸಂಸ್ಥೆ ಜನನ ತಾಳಿತು. ಈ ಕೂಸಿಗೆ ಈಗ ನಾಲ್ಕು ವರುಷ ನಾಲ್ಕು ತಿಂಗಳು. ಈ ಐವತ್ತೆರಡು ತಿಂಗಳಲ್ಲಿ "ಬೇಂದ್ರೆ ವಿಶ್ವರೂಪ ದರ್ಶನ"ದ ಅಗಾಧ ಕಾರ್ಯದಲ್ಲಿ ಸಾಧಿಸಿದ್ದೆಷ್ಟು? ಅಂಬೆಕಾಲು ಹಾಕುವ ಶೈಶವ ಸ್ಥಿತಿ; ಆದರೆ ಅದರ ಭೀಮಬಲ ವರಕವಿ ದತ್ತಾತ್ರೇಯರು ಅದಕ್ಕಿತ್ತಿರುವ ಅಂತಃಶಕ್ತಿ-ಅಂತಃಚೈತನ್ಯ-ಅಂತಃದರ್ಶನ. ಅದಕ್ಕೆ ಯಾರ ಹಣ ಬಲವಿಲ್ಲ, ಅದಕ್ಕಿರುವ ಸಂಪತ್ತು ಸಂಕಲ್ಪ ಬಲ. ಈ ಸಂಶೋಧನ ಸಂಸ್ಥೆಯ ಹೃದಯ, ವರಕವಿಗಳು ಸಂಗ್ರಹಿಸಿದ್ದ ೧೦೨ ವಿಷಯಗಳ ಕುರಿತಾದ ೧೬,೦೦೦ ಗ್ರಂಥ. ಈ ಗ್ರಂಥಗಳ ವೈಶಿಷ್ಟ್ಯವೆಂದರೆ, ಈ ಕೃತಿಗಳೆಲ್ಲ ಬೇಂದ್ರೆ ಹಸ್ತ ಪ್ರತಿಗಳೇ ಆಗಿರುವುದು. "ಅಂತರಂಗದಾ ಮೃದಂಗ, ಅಗ್ನ್ಯಾನ ಮದೋನ್ಮತ್ತ ಅಂಬಿಕಾತನಯದತ್ತ" - ಈ ಮಹಾನ್ ಸಾಲುಗಳ ಮೂಲ ಹಸ್ತಪ್ರತಿ ಇರುವುದು ಶ್ರೀ ಅರವಿಂದರ "Meditations On Savitri" ಕೃತಿಯಲ್ಲಿ. "ಉಂಗುರ" ಅಪ್ರಕಟಿತ ಕವನ ಮೂಡಿರುವುದು ಈ ಮಹಾನ್ ಕೃತಿಯ ಒಳ ಪುಟದಲ್ಲಿ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಈ ೧೬,೦೦೦ ದ ಕೃತಿಗಳ ಪುಟ ಪುಟದಲ್ಲಿ ಪುಟಕ್ಕಿಟ್ಟ ಬಂಗಾರದ ಹಾಗೆ ಅಪರಂಜಿಯಾಗಿ ಮೂಡಿರುವ ಕಾವ್ಯ ಖನಿ, ಸಾಂಖ್ಯ ಖನಿ, ಶಬ್ದಕೋಶ ಖನಿ - ಅಮೂಲ್ಯ ಜ್ಞಾನ-ವಿಜ್ಞಾನ ಖನಿಯನ್ನೆಲ್ಲ ಶೋಧಿಸಿ, ಸಂಶೋಧಿಸಿ, ಸ್ವರೂಪಿಸುವುದು "ಅಗಾಧ" ಕಾರ್ಯ. ಆದರೆ ಅದು ಅವಶ್ಯ, ಅನಿವಾರ್ಯ, ಅಪೂರ್ವ ಕಾರ್ಯ.

ಆಯಿತು; ಈ ವರೆಗೆ ಆಗಿರುವುದಾದರೂ ಏನು? ಮಾಡಬೇಕೆಂಬುದರ ಬಗ್ಗೆ ಒಂದು ರೂಪ-ರೇಷೆ (Blue Print) ಇದೆಯೇ? ಮಾಡಬೇಕಾದ್ದನ್ನು ತಿಳಿಸುವ ಮೊದಲು ಮಾಡಿ ಮುಗಿಸಿರುವುದನ್ನು ತಿಳಿಸಬಯಸುವೆ.

ದ. ರಾ. ಬೇಂದ್ರೆ ಹೇಳಿದ್ದರು - ''ನನ್ನ ಜೀವನವೇ ಮಹಾಕಾವ್ಯ; ಅದು ಔದುಂಬರಗಾಥೆ'' ಎಂದು. ಬೇಂದ್ರೆ ಎಲ್ಲಿ ಬರೆದಿದ್ದಾರೆ ಮಾಹಾಕಾವ್ಯ? ಎಂಬ ಪ್ರಶ್ನೆಯ ಸುಳಿಯಲ್ಲಿ ಹಲವು ಸಾಹಿತಿಗಳು ಸಿಲುಕಿದ್ದಾಗ, ಈ ಸುಳಿಯ ಮೂಲ ಸುಳಿಯನ್ನು ಬೇಂದ್ರೆ ತಮ್ಮ ಕೊನೆಯುಸಿರು ಎಳೆಯುವ ಮುನ್ನ ಕೊನೆಯ ಸಂದೇಶವಾಗಿ ತಮ್ಮ ಪುತ್ರ ಡಾ|| ವಾಮನ ಬೇಂದ್ರೆಯವರಿಗೆ ಕೊಟ್ಟಿದ್ದರು.

ಅಂತೆಯೇ ಬೇಂದ್ರೆ ಮರಣಾನಂತರ, ವಾಮನ ಬೇಂದ್ರೆಯವರು, ಬೇಂದ್ರೆ ಜೀವನ ಮಹಾಕಾವ್ಯದ ಸಂಶೋಧನೆಯಲ್ಲಿ ತೊಡಗಿದರು. ಬೇಂದ್ರೆ ಸಮಗ್ರ ಕಾವ್ಯಕ್ಕೆ ಮಹಾಕಾವ್ಯದ ರೂಪುಕೊಟ್ಟು ಅದರ ವಿಷಯಾಧಾರಿತ ವಿಭಾಗ (Thematic Classification) ಮಾಡಿ, ಆರು ಸಂಪುಟಗಳಲ್ಲಿ (೧) ನಮನ ಸಂಪುಟ (೨) ದರ್ಶನ ಸಂಪುಟ (೩) ವಿಕಾಸ ಸಂಪುಟ (೪) ವಿನ್ಯಾಸ ಸಂಪುಟ (೫) ತತ್ತ್ವ ಸಂಪುಟ (೬) ಸಿದ್ಧಾಂತ ಸಂಪುಟ ಹೀಗೆ ಒಟ್ಟು ೧೪೧೭ ಕವನಗಳನ್ನು ಪುನರ್ ಹೊಂದಾಣಿಕೆ ಮಾಡಿದ್ದಾರೆ. ವಿನೂತನ, ಅಪೂರ್ವ ಸಂಪಾದನೆ ಮಾಡಿದ್ದಾರೆ. ಈ ಕಾವ್ಯದ ಅಂತಃ ದರ್ಶನ ಬಿಂಬಿಸುವ ಉದ್ದೇಶದಿಂದ ಅವುಗಳಿಗೆ ರೇಖಾ ಪ್ರತಿಬಿಂಬಗಳನ್ನು ಸುಪ್ರಸಿದ್ಧ ಕಲಾವಿದರಾದ ಶ್ರೀ ಸುರೇಶ ಕುಲಕರ್ಣಿ ಚಿತ್ರಿಸಿದ್ದಾರೆ. ಈ ಅದ್ಭುತ ಆರು ಸಂಪುಟಗಳಲ್ಲಿ ವಾಮನ ಬೇಂದ್ರೆಯವರ ವಿದ್ವತ್ತು ಭೂಮಿಕೆಗಳಲ್ಲಿ ಮೂಡಿ ಬಂದಿದೆ, ಬೇಂದ್ರೆ ಸಂಶೋಧನ ಸಂಸ್ಥೆಯ ನಿರ್ದೇಶಕರಾದ ಡಾ|| ಕೆ. ಎಸ್. ಶರ್ಮಾ ಈ ಕೃತಿಗಳನ್ನು ಪ್ರಕಾಶನಗೊಳಿಸದ್ದಾರೆ. ಈವರೆಗೆ ಯಾವ ಕವಿಯ ಸಮಗ್ರ ಕಾವ್ಯವೂ ಈ ರೀತಿಯ ಸೈದ್ಧಾಂತಿಕ-ತಾತ್ವಿಕ-ವೈಷಯಿಕ ವರ್ಗೀಕರಣ, ಕಲಾತ್ಮಕ ಪ್ರತಿಬಿಂಬ, ಸುಂದರ ವಿನ್ಯಾಸ ಹೊಂದಿ, ಸಾಹಿತ್ಯ-ಕಲೆಗಳ ಸಂಗಮವಾಗಿ ಪ್ರಕಟವಾಗಿಲ್ಲ ಎಂದರೆ ಅದರಲ್ಲಿ ಅತಿಶಯೋಕ್ತಿ ಇಲ್ಲ. ಈ ಹೊಸ ಶತಮಾನದಲ್ಲಿ ಕಳೆದ ಶತಮಾನದಲ್ಲಿ ಬಾಳಿದ ಮಹಾಕವಿ, ಜಗದ ಕವಿ, ಮಹಾವಿಜ್ಞಾನಿ, ವರಕವಿ ದ. ರಾ. ಬೇಂದ್ರೆಯವರಿಗೆ ಬೇಂದ್ರೆ ಸಂಶೋಧನ ಸಂಸ್ಥೆ ಸಲ್ಲಿಸಿರುವ ಅಪೂರ್ವ ಶ್ರದ್ಧಾಂಜಲಿ ಇದಾಗಿದೆ. ಇಂದು ಈ ಆರು ಸಂಪುಟಗಳ ಮಾಲಿಕೆಗೆ ಗದ್ಯ-ಪದ್ಯ ಸಮುಚ್ಚಯವಾಗಿ ''ಶ್ರೀ ಅರವಿಂದ ದರ್ಶನ'' ನಾಮಧೇಯದ ಏಳನೆಯ ಸಂಪುಟ ಪ್ರಕಟನೆಗೆ ಸಿದ್ಧವಾಗಿದೆ.

ಬೇಂದ್ರೆ ಸಂಶೋಧನ ಸಂಸ್ಥೆಯಾಗಿ 'ವಿಶ್ವಶ್ರಮ ಚೇತನ'ದಲ್ಲಿ ಇದರ ಅಂಗ ಸಂಸ್ಥೆಯಾಗಿ ''ಬೇಂದ್ರೆ ಸಂಗೀತ ಅಕ್ಯಾಡೆಮಿ''ಯನ್ನು ಪ್ರಾರಂಭ ಮಾಡಲಾಯಿತು. ಈ ಅಕ್ಯಾಡೆಮಿಯ ಪ್ರಾರಂಭಕ್ಕೆ ಮುಖ್ಯ ಪ್ರೇರಣೆಯೊದಗೆ ಬೇಂದ್ರೆ ಕಾವ್ಯಕ್ಕೆ ಸಂಗೀತವನ್ನು ಅಳವಡಿಸಿ, ''ಬೇಂದ್ರೆ ಸಂಗೀತ'' ರವೀಂದ್ರ ಸಂಗೀತದ ಮಾದರಿಯಲ್ಲಿ ವಿಜೃಂಭಿಸಬೇಕು ಎಂಬ ಮಹಾದಾಶೆ. ಇದಕ್ಕೆ ಮುಖ್ಯ ಪ್ರೇರಣೆಯೆಂದರೆ, ಬೇಂದ್ರೆಯವರೇ ಹಿಂದೂಸ್ತಾನಿ ಸಂಗೀತಕ್ಕೆ ಕನ್ನಡದಲ್ಲಿ ಕೆಲವು ಮೂಲ ಚೀಜುಗಳನ್ನು ರಚಿಸಿದ್ದುದು. ಬಹಳ ದಶಕಗಳ ಹಿಂದೆ ಅಂದಿನ ಪ್ರಖ್ಯಾತ ಮ್ಯೂಸಿಕ್ ರೆಕಾರ್ಡಿಂಗ್ ಕಂಪನಿ ಹೆಚ್‌ಎಮ್‌ವ್ಹಿ ಬೇಂದ್ರೆಯವರ ಧ್ವನಿಯಲ್ಲೇ (ಏಕತಾರಿಯ ಸಹಾಯದಿಂದ)

"ತುಂತುಂತುಂತುಂತುಂಬಿ ಬಂದಿತ್ತ" ಕವನವನ್ನು ಹಾಡಿಸಿದ್ದು. ಬೇಂದ್ರೆ ಮಹಾಕಾವ್ಯಕ್ಕೆ ಶಾಸ್ತ್ರೀಯ ಸಂಗೀತದ ಆಯಾಮ ಕೂಡಿದಾಗ ಆ ಕಾವ್ಯ ಆಸ್ವಾದನೆ ಹೆಚ್ಚು ಅರ್ಥವತ್ತಾಗಿ ಅಪ್ಯಾಯಮಾನವಾಗುವುದು ಎಂಬ ಭಾವನೆ. ಈ ದಿಶೆಯಲ್ಲಿ ಸುಪ್ರಸಿದ್ಧ ಹಿಂದೂಸ್ತಾನಿ ಶಾಸ್ತ್ರೀಯ ವಿದ್ವಾಂಸರಾದ ಪಂಡಿತ್ ಕೃಷ್ಣಾಜಿ ಕುರ್ತುಕೋಟಿ ಇವರ ನಿರ್ದೇಶನದಲ್ಲಿ ಬೇಂದ್ರೆಯವರ ಆಯ್ದ ಕವನಗಳಿಗೆ, ಶಾಸ್ತ್ರೀಯ ಸಂಗೀತ ಸ್ವರ ಸಂಯೋಜನೆ ಮಾಡಿ, ಈಗಾಗಲೇ ಐದು ಕೃತಿಗಳನ್ನು ಪ್ರಕಟಿಸಿದ್ದೇವೆ. ಪ್ರತಿ ವರುಷ ಭಾರತ ಹುಣ್ಣಿಮೆಯ ಇಡೀ ರಾತ್ರಿ "ಬೇಂದ್ರೆ ಸಂಗೀತ"ವನ್ನು ಹುಬ್ಬಳ್ಳಿ 'ವಿಶ್ವಶ್ರಮ ಚೇತನ"ದಲ್ಲಿ ನಿರ್ಮಿಸಲಾಗಿರುವ "ಬೇಂದ್ರೆ ಕುಟೀರ"ದಲ್ಲಿ ನಡೆಸುತ್ತೇವೆ. ೨೦೦೫ರ ಬೇಂದ್ರೆ ೧೧೦ನೇ ಜನ್ಮ ದಿನವನ್ನು ಗುರುಪ್ರತಿಪದ (ಭಾರತ ಹುಣ್ಣಿಮೆಯ ಮರುದಿನ ಬೆಳಗು) ದಂದು, ದಿ|| ೨೫-೨-೨೦೦೫ ರಂದು, ಆಚರಿಸುವಾಗ "ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು" ಕೃತಿಯನ್ನು ಹಿಂದೂಸ್ತಾನಿ ಸ್ವರ ಸಂಯೋಜನೆಯೊಂದಿಗೆ ಪ್ರಕಟಿಸುವ ಯೋಜನೆಯನ್ನು ಕಾರ್ಯಗತಗೊಳಿಸಿ ನಿಮ್ಮ ಕೈಯಲ್ಲಿತ್ತಿದ್ದೇವೆ.

ಇನ್ನು ಮಾಡಬೇಕೆಂದು ಹಾಕಿಕೊಂಡಿರುವ ಭಾವಿ ಯೋಜನೆಯಾದರೂ ಏನು? ಬೇಂದ್ರೆ ಸಂಶೋಧನ ಸಂಸ್ಥೆಯ ಬೃಹತ್ ಯೋಜನೆ ಎಂದರೆ, ಬೇಂದ್ರೆಯವರ ನಾಟಕ, ಗದ್ಯ, ವಿಮರ್ಶೆ ಕಥೆ, ಹರಟೆ, ಪತ್ರ ವ್ಯವಹಾರ ಮುಂತಾದ ವಿವಿಧ ಸಾಹಿತ್ಯ ಪ್ರಕಾರಗಳ ಎಲ್ಲ ಪ್ರಕಟಿತ, ಅಪಕ್ರಟಿತ ಕೃತಿಗಳಲ್ಲದೆ, ಬೇಂದ್ರೆ ಸಂಗೀತ ಸಮಗ್ರ ದರ್ಶನ ಹಾಗೂ ಬೇಂದ್ರೆ ವಿಜ್ಞಾನ ದರ್ಶನಕ್ಕೆ ಸಂಬಂಧಿಸಿದ ಸಂಶೋಧನೆಯನ್ನು ಕುರಿತು ಪ್ರಕಟಿತ ಅಪ್ರಕಟಿತ ಕೃತಿಗಳೆಲ್ಲವನ್ನು ಶೋಧಿಸಿ, ಸಂಗ್ರಹಿಸಿ, ಸಂಶೋಧಿಸಿ, ಒಟ್ಟು ೨೫ ಸಂಪುಟಗಳನ್ನು ಡಾ|| ವಾಮನ ಬೇಂದ್ರೆ ಸಂಪಾದಕತ್ವದಲ್ಲಿ ಪ್ರಕಟಿಸಬೇಕು ಎನ್ನುವುದಾಗಿದೆ.

ಹುಬ್ಬಳ್ಳಿಯ ಗೋಕುಲ ರೋಡ್, ಬಸವೇಶ್ವರ ನಗರದಲ್ಲಿರುವ - "ವಿಶ್ವಶ್ರಮ ಚೇತನ ಆವರಣ"-ಬೇಂದ್ರೆ ಸ್ಮರಣೆಯ ಚೈತನ್ಯ ಕ್ಷೇತ್ರ. ಈ ಆವರಣದಲ್ಲಿ ವರಕವಿ ದ. ರಾ. ಬೇಂದ್ರೆಯವರ ಪ್ರತಿಮೆ ಸ್ಥಾಪಿತವಾಗಿದೆ, ಬೇಂದ್ರೆ ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕ್ಯಾಡೆಮಿ ಇವೆ, 'ಬೇಂದ್ರೆ ಕಂಡ ಬೆನಕ' ವಿಶಿಷ್ಟವಾದ ವಿದ್ಯಾ ವಿನಾಯಕ ದೇವಾಲಯವಿದೆ. ಈ ದೇವಾಲಯದ ವಿಶೇಷತೆಯೆಂದರೆ, ಈ ದೇವಾಲಯದ ಸುತ್ತಲೂ ದ. ರಾ. ಬೇಂದ್ರೆಯವರು ರಚಿಸಿದ ಗಣಪತಿಯ ಕುರಿತಾದ ಪದ್ಯಗಳನ್ನು ಕಲ್ಲಿನಲ್ಲಿ ಕೆತ್ತಿಸಿ ದೇವಾಲಯದ ಸುತ್ತಲೂ ಕೂಡ್ರಿಸಲಾಗಿದೆ. ಈ ಕವನಗಳನ್ನು ಓದುತ್ತ ಹೋದಹಾಗೆ ಬೇಂದ್ರೆಯವರ ವಿಶಿಷ್ಟ ದೃಷ್ಟಿಯಲ್ಲಿ ಬೆನಕನ ದರ್ಶನವಾಗುತ್ತದೆ. ಬೇಂದ್ರೆ ಜನ್ಮ ಶತಮಾನೋತ್ಸವ ಸ್ಮರಣೆಗೆಂದು ನಿರ್ಮಿಸಿದ "ಬೇಂದ್ರೆ ಕುಟೀರ" ಇದೆ. ಇತ್ತೀಚೆ ದ. ರಾ. ಬೇಂದ್ರೆ ಇಪ್ಪತ್ತೈದನೆ ವಾರ್ಷಿಕ ಸಂಸ್ಮರಣೆಯಾದ ನರಕ ಚತುರ್ದಶಿ (ದೀಪಾವಳಿ)ಯ ದಿನ ಬೇಂದ್ರೆಯವರಿಗೆ ಒಂದು ಹೊಸ ಸ್ಮಾರಕವನ್ನು ನಿರ್ಮಿಸಲಾಗಿದೆ; ಅದುವೇ "ಔದುಂಬರದತ್ತ

ಚೈತನ್ಯ''. ವಿಶ್ವಶ್ರಮ ಚೇತನ ಆವರಣದಲ್ಲಿ ಆಕಸ್ಮಿಕವಾಗಿ ಗುರುತಿಸಲಾದ ಔದುಂಬರ ವೃಕ್ಷದ ಸುತ್ತು ವಿನೂತನ ಸಂಸ್ಮರಣೆಯನ್ನು ರಚಿಸಲಾಗಿದೆ. ಬೇಂದ್ರೆ ಸ್ಮರಣೆಗೆ ಇದು ಇತ್ತೀಚಿನ ಸೇರ್ಪಡೆ. ಶೀಘ್ರದಲ್ಲೆ ''ಬೇಂದ್ರೆ ಚಿತ್ರಕಲಾ ಅಕ್ಯಾಡೆಮಿ'', ''ಬೇಂದ್ರೆ ನಾಟಕ ಅಕ್ಯಾಡೆಮಿ''ಗಳನ್ನು ಪ್ರಾರಂಭಿಸುವ ಯೋಜನೆಯೂ ಇದೆ. ಒಟ್ಟಾರೆ ''ವಿಶ್ವಶ್ರಮ ಚೇತನ'' ಬೇಂದ್ರೆ ಚೈತನ್ಯ ಕ್ಷೇತ್ರವಾಗಿ ಪ್ರೇಕ್ಷಣೀಯವಾಗಿ ರೂಪಿಸುವುದಲ್ಲದೆ, ವಿಶ್ವಕ್ಕೆ ಬೇಂದ್ರೆ ಸಮಗ್ರ ಜ್ಞಾನ-ವಿಜ್ಞಾನ-ಸುಜ್ಞಾನ ದರ್ಶನವನ್ನು ಮಾಡಿಸುವುದೇ ಆಗಿದೆ.

ಬೇಂದ್ರೆ ಸಂಶೋಧನ ಸಂಸ್ಥೆಯು ಡಾ॥ ಕೆ. ಎಸ್. ಶರ್ಮಾ ನಿರ್ದೇಶನದಲ್ಲಿ, ವರಕವಿ ಬೇಂದ್ರೆಯವರ ಸುಪುತ್ರ ಡಾ॥ ವಾಮನ ಬೇಂದ್ರೆಯವರ ಸಹ-ನಿರ್ದೇಶನದಲ್ಲಿ, ಸುಪ್ರಸಿದ್ಧ ಕಲಾವಿದ ಶ್ರೀ ಸುರೇಶ ಕುಲಕರ್ಣಿ ಹಾಗೂ ಸುಪ್ರಸಿದ್ಧ ಸಂಗೀತ ವಿದ್ವಾಂಸರಾದ ಪಂಡಿತ ಕೃಷ್ಣಾಜಿ ಕುರ್ತುಕೋಟಿ ಇವರುಗಳ ಸಹಕಾರ-ಸಹಾಯದಿಂದ ''ಬೇಂದ್ರೆ ವಿಶ್ವರೂಪ ದರ್ಶನ''ದ ಅಗಾಧ ಕಾರ್ಯದ ಜವಾಬ್ದಾರಿಯನ್ನು ಈ ನವ ಶತಮಾನದ ನವ ಸವಾಲಾಗಿ ಸ್ವೀಕರಿಸಿದೆ. ''ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೆ'' ಎಂಬ ಬೇಂದ್ರೆ ಭವಿಷ್ಯವಾಣಿಯನ್ನು ಸಾರ್ಥಕಗೊಳಿಸಬೇಕೆಂಬ ಸಾಹಸಕಾರ್ಯ ನಿರ್ವಹಣೆ, ಅಂತೆಯೇ ವಿಶ್ವದಲ್ಲಿ ಮಾವಿದ್ವಿಷಾವಹೈ ಬುನಾದಿಯ ನವಮಾನವೀಯತೆಯ ಆವಿರ್ಭಾವಾಗಬೇಕು ಹಾಗೂ ಬೇಂದ್ರೆಯವರ ಕನಸಿನ

''ದುಡಿಯುವ ಬಡವರು
ನಾಡಿನ ಒಡೆಯರು
ದುಡಿಯದ ಒಡೆಯರು
ಕಾಣದ ಹಾದಿಯ ಹಿಡಿವರು''

ಎಂಬುದನ್ನು ನನಸಾಗಿಸಬೇಕು ಎಂಬ ಛಲದಿಂದ ಮುನ್ನಡೆಯುತ್ತಿದೆ. ಬೇಂದ್ರೆ ಸಿದ್ಧಾಂತದಲ್ಲಿ ವಿಶ್ವಾಸ ಹೊಂದಿ,

''ಕೂಡಾಡಿ,
ಕೂಡುಂಡು,
ನಡೆಯೋಣ ಕೂಡಿ ಕೂಡಿ''

ಎಂಬ ಸೂತ್ರ ಹಿಡಿದು

''ರಸವೇ ಜನನ,
ವಿರಸ ಮರಣ,
ಸಮರಸವೇ ಜೀವನ''

ಎಂಬ ಮಾರ್ಗದಲ್ಲಿ "ಶಾಂತಿರಸವೇ ಪ್ರೀತಿಯಿಂದ ಮೈದೋರಿತಣ್ಣ, ಇದು ಬರೀ ಬೆಳಗಲ್ಲೋ ಅಣ್ಣ" ಎಂಬ ಹೊಸ ಬೆಳಗಿನೆಡೆಗೆ ಹೊಸ ವಿಶ್ವ ಕಟ್ಟಲು ಮುನ್ನಡೆಯೋಣ.

"ಜಯ ಕರ್ನಾಟಕ
ಜಯ ಭಾರತ
ಜಯ್ ಜಗತ್
ಜಯ್ ತಾರಾಮಂಡಲ
ಜಯ, ಜಯ, ಜಯ, ಜಯ ಹೇ,"

ತಮ್ಮ ವಿಶ್ವಾಸಿ,

(ಡಾ॥ ಕೆ. ಎಸ್. ಶರ್ಮಾ)
ನಿರ್ದೇಶಕರು
ವರಕವಿ ಡಾ॥ ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಸಂಗೀತ ಅಕಾಡಮಿ.

ಬೇಂದ್ರೆ ಕುಟೀರ, ಹುಬ್ಬಳ್ಳಿ
೨೫-೨-೨೦೦೫
ವರಕವಿ ದ.ರಾ.ಬೇಂದ್ರೆ ೧೦೯ನೇ ವಾರ್ಷಿಕ ಜನ್ಮದಿನ.

ಭಾಗ - ೪

# ಸ್ವರ ಸಂಯೋಜನೆ
# ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತಕ್ಕಾಗಿ

''ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು''
ಎಂಬ ಈ ಕೃತಿಯಲ್ಲಿಯ ಗೀತಗಳಿಗೆ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಪದ್ಧತಿಯನ್ನು ಅನುಸರಿಸಿ ಸ್ವರ ಸಂಯೋಜನೆ ಮಾಡಲಾಗಿದೆ. ಇಲ್ಲಿಯ ಎಲ್ಲ ಸೂಚನೆಗಳನ್ನು ಗ್ರಹಿಸಿ ಹಾಡುಗಾರರು ತಮ್ಮ ಗಾನ ಕೌಶಲ್ಯವನ್ನು ಅಭಿವ್ಯಕ್ತ ಪಡಿಸಬೇಕಾಗಿ ಬಿನ್ನಹ.

– ಸಂ.

# ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು



ಸ್ವರ ಸಂಯೋಜನೆಯ ಗೀತೆಗಳಿಗಾಗಿ ಪುಟ ತಿರುವಿರಿ

# ಅನುಕ್ರಮಣಿಕೆ

## ಸ್ವರ ಸಂಯೋಜನೆ : ಶ್ರೀ ಕೃಷ್ಣಾಜಿ ಕುರ್ತಕೋಟಿ

| ಅ.ನಂ. | ಹಾಡಿನ ಹೆಸರು | ರಾಗ | ತಾಳ |
|---|---|---|---|
| ೧. | ಸ್ವಾತಂತ್ರದೇವಿಗೆ | ಬಸಂತ್ | ಧ್ರುತ್ ಏಕತಾಲ್ |
| ೨. | ಶ್ರೀಮಾತೃಶ್ರೀಗೆ | ಬಸಂತ್ | ಝಫ್‌ತಾಲ್ |
| ೩. | ಬರುವಳು ಬರುವಳು | ದುರ್ಗಾ | ತ್ರಿತಾಲ್ |
| ೪. | ದಿ ಮದರ್ | ನಾಯಕಿ ಕಾನಡಾ | ಝಫ್‌ತಾಲ್ |
| ೫. | ಶ್ರೀತಾಯಿಗೆ | ಮಧುಮಾದ ಸಾರಂಗ | ಝಫ್‌ತಾಲ್ |
| ೬. | ಲೋಕಾಲೋಕೇ | ಬಾಗೇಶ್ರೀ | ತ್ರಿತಾಲ್ |
| ೭. | ಓ ತಾಯಿ-ಮಾಯಿ | ತ್ರಿವೇಣಿ | ಕೇರವಾ |

| | | | |
|---|---|---|---|
| ೮. | ಹೋಗೋಬಾರೋ ಮಾಡಬ್ಯಾಡ | ಅಲ್ಹೈಯಾ ಬಿಲಾವಲ್ | ಕೇರವಾ |
| ೯. | ಶ್ರೀ ಅರವಿಂದರಿಗೆ | ಸಾರಂಗ (ವೃಂದಾವನಿ) | ದಾದರಾ |
| ೧೦. | ಅರಿವಿಂದನಾಭನ ಪಾದಾರವಿಂದಕ್ಕೆ | ಛಾಯಾನಟ್ | ಆದ್ಧಾ ತ್ರಿತಾಲ್ |
| ೧೧. | ಸದಾಶಿವಗೆ | ಭೂಪ್ | ತ್ರಿತಾಲ್ |
| ೧೨. | ಬೆಳಕಿನ ಲಿಂಗ | ಪೂರವೀ | ತ್ರಿತಾಲ್ |
| ೧೩. | ಒಂದು ಹಲವು | ದೇಸ್ | ದ್ರುತ್ ಏಕತಾಲ್ |
| ೧೪. | ಪ್ರಾಣಪಕ್ಷಿ | ಪೂರಿಯಾ ಧನಾಶ್ರೀ | ತ್ರಿತಾಲ್ |
| ೧೫. | ಬೆಳಕು | ಜಿಂಝೋಟಿ | ತ್ರಿತಾಲ್ |
| ೧೬. | ಸಹಸ್ರತಂತ್ರೀ ನಿಃಸ್ವನದಂತೆ | ಹಿಂಡೋಲ್ | ತ್ರಿತಾಲ್ |
| ೧೭. | ಮಂಗಳ ಗೀತ | ಭೈರವೀ | ತ್ರಿತಾಲ್ |

# ಈ ಪುಸ್ತಕದಲ್ಲಿಬಂದಿರುವ ರಾಗಗಳ ಶಾಸ್ತ್ರೀಯ ವಿವರಣೆಯ ಕೋಷ್ಟಕ

| ಅ. ಸಂ. | ರಾಗದ ಹೆಸರು | ಥಾಟ | ವಾದಿ ಸಂವಾದಿ | ಆರೋಹ - ಅವರೋಹ | ಗಾಯನ ಸಮಯ |
|---|---|---|---|---|---|
| ೧. | ಭೂಪ್ | ಕಲ್ಯಾಣ್ | ಗ - ಧ | ಸರಿಗಪಧಸಾ - ಸಾಧಪಗರಿಸಾ | ರಾತ್ರಿ ೧ನೇ ಪ್ರಹರ |
| ೨. | ಛಾಯಾನಟ್ | ಕಲ್ಯಾಣ್ | ಪ - ರಿ | ಸರಿಗಮಪನಿಧಸಾ - ಸಾನಿಧಪಮಪಧನಿಧಪಮರಿಸಾ | ರಾತ್ರಿ ೧ನೇ ಪ್ರಹರ |
| ೩. | ಬಾಗೇಶ್ರೀ | ಕಾಫಿ | ಮ - ಸಾ | ಸಾಮಗಮಧನಿಸಾ - ಸಾನಿಧಮಪಧಮಗರಿಸಾ | ಮಧ್ಯ ರಾತ್ರಿ |
| ೪. | ದುರ್ಗಾ | ಬಿಲಾವಲ | ಮ - ಸಾ | ಸಾರೆಮಪಧಸಾ - ಸಾಧಪಮರಿಸಾ | ರಾತ್ರಿ ೨ನೇ ಪ್ರಹರ |
| ೫. | ಪೂರಿಯಾ ಧನಾಶ್ರೀ | ಪೂರ್ವೀ | ಪ - ರಿ | ನಿರಿಗಮಪಧಪನಿಸಾ - ರಿನಿಧಪಮಗಮರಿಗರಿಸಾ | ಸಂಧ್ಯಾಕಾಲ |
| ೬. | ಹಿಂಡೋಲ್ | ಕಲ್ಯಾಣ್ | ಧ - ಗ | ಸಗಮಧನಿಧಸಾ - ಸಾನಿಧಮಗಸಾ | ದಿನದ ೧ನೇ ಪ್ರಹರ |
| ೭. | ಬಸಂತ್ | ಪೂರ್ವೀ | ಸಾ - ಮ | ಸಾಗಮಧರಿಸಾ - ರಿನಿಧಪಮಗಮಧಮಗರಿಸಾ | ರಾತ್ರಿ ೪ನೇ ಪ್ರಹರ |

| | | | | | |
|---|---|---|---|---|---|
| ೯. | ಮಧುಮಾದ ಸಾರಂಗ | ಕಾಫಿ | ರಿ - ಪ | ಸಾರಿಮಪನಿಸಾ - ಸಾನಿಪಮಪರಿಸಾ | ಹಗಲು ೨ನೇ ಪ್ರಹರ |
| ೧೦. | ತ್ರಿವೇಣೀ | ಪೂರ್ವೀ | ರಿ - ಪ | ಸಾರಿಗಪಧನಿಸಾ - ಸಾನಿಧಪಗರಿಸಾ | ಸಾಯಂಕಾಲ |
| ೧೧. | ಅಲ್ಲೈಯಾ ಬಿಲಾವಲ್ | ಬಿಲಾವಲ್ | ಧ - ಗ | ಸಾರಿಗಪಧನಿಸಾ - ಸಾನಿಧಪಧನಿಧಪಮಗರಿಸಾ | ಪ್ರಾತಃಕಾಲ |
| ೧೨. | ವೃಂದಾವನೀ ಸಾರಂಗ | ಕಾಫಿ | ರಿ - ಪ | ಸಾರಿಮಪನಿಸಾ - ಸಾನಿಪಮರಿನಿಸಾ | ಮಧ್ಯಾಹ್ನ ೨ನೇ ಪ್ರಹರ |
| ೧೩. | ಪೂರ್ವೀ | ಪೂರ್ವೀ | ಗ - ನಿ | ಸರಿಗಮಪಧನಿಸಾ - ಸಾನಿಧಪಮಪಗಮಗರಿಸಾ | ಸಂಧ್ಯಾಕಾಲ |
| ೧೪. | ದೇಸ್ | ಖಮಾಜ್ | ರಿ - ಪ | ಸರಿಮಪನಿಸಾ - ಸಾನಿಧಪಮಗರಿಗನಿಸಾ | ರಾತ್ರಿ ೨ನೇ ಪ್ರಹರ |
| ೧೫. | ಜಿಂಝೋಟಿ | ಖಮಾಜ | ಗ - ನಿ | ಸರಿಮಪಧಸಾ - ಸಾನಿಧಪಮಗರಿಗನಿಸಾ | ರಾತ್ರಿ ೨ನೇ ಪ್ರಹರ |
| ೧೬. | ಭೈರವೀ | ಭೈರವೀ | ಮ - ಸಾ | ಸರಿಗಮಪಧನಿಸಾ - ಸಾನಿಧಪಮಗರಿಸಾ | ಪ್ರಾತಃಕಾಲ ಹಾಗೂ ಗಾಯನದ ಮಂಗಳದಲ್ಲಿ ಸರ್ವಕಾಲಿಕ |



## 1 ಸ್ವಾತಂತ್ರ ದೇವಿಗೆ

ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು/೭ ೮

ರಾಗ : ಬಸಂತ್

ತಾಳ : ದ್ರುತ್ ಏಕತಾಲ್



| 1<br>X | 2<br>O | 3 | 4<br>O | 5 | 6 |
|---|---|---|---|---|---|
| ಸಾಂ-<br>ಸ್ವಾತ | ನೀ-<br>ತಂऽ | ಧಪ<br>ತ್ರದ | 1<br>ಮಂऽ<br>ಹುऽ | ಗಮಂ<br>ಟ್ಟುಹ | ऽಗ<br>ऽಬ್ಬ |
| ಗಗ<br>ಕರೆ | ಮಂಮಂ<br>ವುದು | ಧ಼ಧ಼<br>ಸಾऽ | ಸಾಂಸಾಂಸಾಂ<br>ಏರದ | ನಿರ಼ೆ<br>ಕऽ | ऽಸಾಂ<br>ऽಬ್ಬ |
| ಸಾಂನಿ<br>ದೀऽ | ಧ಼ऽ<br>ಪದೀ | ऽಪ<br>ऽಪ | ಮಂऽ<br>ಸಮ | ಗಮಂ<br>ಸಮೊ | ऽಗ<br>ऽಪ |
| ಮಂಗ<br>ಇದೋ | ऽಮಂ<br>ऽಭಾ | ऽಧ಼<br>ರತ | ಸಾಂऽ<br>ಹುऽ | ನಿರ಼ೆ<br>ಣ್ಣಿಮೆ | ऽಸಾಂ<br>ऽऽ |
| | | | | | |

| ಸಾ-<br>ಜೀऽ | ಸಾಮ<br>ವರ | -ಮ<br>ಥಕೆ | ಮಮ<br>ಪ್ರಾಽ | ಮಸ<br>ಣದ | ಮಗ<br>ಽಶ್ವ |
|---|---|---|---|---|---|
| ಮಽ<br>ತಾಽ | ಽಗ<br>ಽವೆ | ಮಽ<br>ತಾಽ | ಽಗ<br>ಽವು | ಮ̍ಗ<br>ಹಽ | ರಿಸಾ<br>ಣ್ಣೆವೆ |
| ಮ̍ಮ̍<br>ಎಽ | ಧ಼ಸಂ<br>ಲ್ಲಬೆ | ಸಂಸಂ<br>ಳಕು | ಷಃಸ<br>ಎಽ | ನಿರಿಂ<br>ಲ್ಲಬು | ಸಂಸಂ<br>ಯಲು |
| ಧ಼ನಿ<br>ಮಽ | ಧರಿಂ<br>ಣ್ಣಕ | ನಿಧ಼<br>ಣಕು | ಪ-<br>ಕಽ | -ಮ̍<br>ಽಣ್ಣೆ | ಗ-<br>ವೆಽ |

## 2 ಶ್ರೀಮಾತೃಶ್ರೀಗೆ

ರಾಗ : ಬಸಂತ್

ತಾಳ : ಝುಫ್‌ತಾಲ್

| 1<br>X | 2 | 3<br>— | 4 | 5 | 6<br>O | 7 | 8<br>— | 9 | 10 |
|---|---|---|---|---|---|---|---|---|---|
| ಮ̍<br>ನಿ | ಽ<br>ಽ | ಧ̱<br>ನ್ನ | ಸಾ̇<br>ನೋ | ನಿ<br>ಽ | 1<br>ಧ<br>ಟ | ಪ<br>ವೆ | ಮ̍<br>ಹಾ | ಽ<br>ಽ | ಗ<br>ಲ |
| ಮ̍<br>ತಾ | ಮ̍<br>ಽ | ಗ<br>ಯಿ | ಮ̍<br>ನೀ | ಧ̱<br>ಽ | ಸಾ̇<br>ಽ | ಽ<br>ಽ | ನಿ<br>ನೂ | ರಿ̇<br>ಽ | ಸಾ̇<br>ಽ |
| ಸಾ̇<br>ಕಂ | ನಿ<br>ಽ | ಧ̱<br>ಗ | ಧ̱<br>ಳಿಂ | ಪ<br>ಽ | ಮ̍<br>ದ | ಗ<br>ಲೆ | ಮ̍<br>ಕು | ಮ<br>ಡಿ | ಗ<br>ವೆ |
| ಗ(ಮ̍<br>ಕೂಽ | ಧ̱<br>ಽ | ಽ<br>ಽ | ಮ̍<br>ಷು | ಮ̍<br>ನಾ | ಗ<br>ಽ | ರಿ̱<br>ಽ | ರಿ̱<br>ಽ | ಸಾ<br>ನು | ಽ |
| | | | | | | | | | |

| ಸಾ ಕಂ | ಸಾ ಽ | ಮ ಗ | ಮ ಳಿಂ | ಮ ಽ | ಮ̄ ದ | ಮ̄ ಲೆ | ಮ̄ ಕು | ಗ ಡಿ | ಗ ವೆ |
|---|---|---|---|---|---|---|---|---|---|
| ಮ̄ ತಾ | ಮ̄ ಽ | ಧ̣ ಽ | ಮ̄ ಽ | ಧ̣ ಯಿ | ಸಾ̇ ನೀ | ನಿ ಽ | ಸಾ̇ ಽ | ರಿ̣̇ ಽ | ಸಾ̇ ಸು |
| ನಿ ನ | ಸಾ̇ ಽ | ಗ̇ ನ್ನ | ಗ̇ ಕ | ಗ̇ ಽ | ಮ̇ ಣ್ಣೀ | ಗ̇ ಽ | ರಿ̣̇ ಕಿ | ರಿ̣̇ ಎ | ಸಾ̇ ಯು |
| ಮ̄ ಕ | ಗ ಽ | ಮ̄ ಎ | ಮ̄ ಽ | ಧ̣ ಯು | ಸಾ̇ ನಾ | - ಽ | ನಿ ಽ | ರಿ̣̇ ಸು | ಸಾ̇ ಽ |

## 3 ಬರುವಳು ಬರುವಳು



ರಾಗ : ದುರ್ಗಾ

ತಾಳ : ತ್ರಿತಾಲ್



| 5<br>O | 6 | 7<br>— | 8 | 1<br>X | 2 | 3<br>— | 4 |
|---|---|---|---|---|---|---|---|
| ಪಪ<br>ಬರು | ಪಪ<br>ವಳು | ಧಪ<br>ಬರು | ಮಪಧ<br>ವಽಳು | 1<br>ಮಮ<br>ಬಂಽ | ಮಧಪಮ<br>ದೇಽಽಽಽ | ರಿಮ<br>ಬರು | ರಿಸಾ<br>ವಳು |
| ರಿಧ<br>ಕಾಽ | ಸರಿ<br>ದಿರಿ | ಮಮ<br>ಹಾಽ | ಪ-<br>ಗೋಽಽ | ಮಧಪಮ<br>ಹೀಽಽಽಽ | ರೀ-<br>ಽಽ | ರಿಮಪಮ<br>ಗೋಽಽಽಽ | ರಿಸಾ<br>ಽಽ॥ |
| ಸಾಸಾ<br>ನಸು | ರಿಮಮ<br>ಕಿಽನ | ಪಧ<br>ನಗೆ | ಧ-<br>ಗಣ್ | ಧ-<br>ಸೂಽ | ಪಧಪಮ<br>ಸುಽತಽ | ರಿರಿ<br>ಸುಽ | ಸಾ-<br>ತ್ತೂ |
| ಧರಿ<br>ಈಽ | ಸಾ-<br>ಗೋಽಽ | ಧ-<br>ಇಽ | ಪ-<br>ನ್ನಾ | ಧಧಪಮ<br>ನಾಽಽಽ | ಪಧಸರಿ<br>ಽಽಽಽ | ಸಾಸಾಧಪ<br>ಗೋಽಽಽಽ | ಮಮರಿಸ<br>ಽಽಽಽ |
| | | | | | | | |

| | | | | 2 | | | |
|---|---|---|---|---|---|---|---|
| ಧಮ<br>ಕಿಟ | ಪಧ<br>ಕಿಯ | ಸಂಸಂ<br>ಲ್ಲಿಣು | ಸಂಸಂ<br>ಕುವ | ಧಸಂ<br>ನಗೆ | ರಿರಿ<br>ಮೊಗ | ಸಂಸಂ<br>ದಂಽ | ಧಪ<br>ತೇಽ |
| ರೀ-<br>ತಾಽ | ರಿಸಂ<br>ರೆಗ | ರಿಮ<br>ಳಾಽ | ರಿಸಂ<br>ಚೆಯ | ಧ-<br>ನೀಽ | ಪಮ<br>ಲಿಮೆ | ಪಧ<br>ಯಂಽ | ಪ-<br>ತೇಽ |
| ಧಮ<br>ಹನಿ | ಪಧ<br>ಸದೆ | ಸಂಧ<br>ಬರಿ | ಸಂಸಂ<br>ಸುರಿ | ಧರಿ<br>ಯುವ | ಸಂ-<br>ಳೂಽ | ಧಧ<br>ಽಽ | ಪ<br>ಽ |
| ಪಪ<br>ಬೆಽ | ಪಪ<br>ಳ್ಳಿಯ | ಧಪಮಪ<br>ಕಿಽರಽ | ಧ-<br>ಣಗ | ಧಧ<br>ಳೇಽ | --<br>ಽಽ | ಪಧಪಮ<br>ರಿಽಽಽಽ | ರಿಸಾ<br>ಽಽ |
| ಸಾಸಾ<br>ಹೊಽ | ಧಪ<br>ನ್ನಿನ | ಮಧಪಮ<br>ಹಽಡಽ | ರಿ-<br>ಗವ | ಮ-<br>ಸೇಽ | --<br>ಽಽ | ರಿ-<br>ರೀಽ | ಸಾ-<br>ಽಽಽ |

ಬರುವಳು ಬರುವಳು.......ಮುಂದುವರಿಯುವುದು



## 3 ಬರುವಳು ಬರುವಳು........ಮುಂದುವರಿದಿದೆ

ರಾಗ : ದುರ್ಗಾ

ತಾಳ : ತ್ರಿತಾಲ್

| 5 O | 6 | 7 | 8 | 1 X | 2 | 3 | 4 |
|---|---|---|---|---|---|---|---|
| ಧಮ<br>ಜಡಿ | ಪಧ<br>ವಳು | ಸಾಸಾ<br>ಸುರಿ | ಸಾಸಾ<br>ವಳು | 3<br>ಧಸಾ<br>ತೊರೆ | ರಿರಿ<br>ಯುವ | ಸಾಸಾ<br>ಕರ | ಧಪ<br>ಳುಽ |
| ರಿ-<br>ಯಾಽ | ರಿಮ<br>ರಾಽ | ರಿರಿ<br>ರದೋ | ಸಾಸಾ<br>ಬಗೆ | ಧಧ<br>ಯರ | ಪಮ<br>ಳೀಽ | ಪಧ<br>ಽಽ | ಪ-<br>ಽ |
| ರಿ-<br>ಜೀಽ | ರಿಪ<br>ವವು | ರಿಮಪ<br>ನಽಽ | ಮರಿಸಾ<br>ಽಕ್ಷಽ | ರಿರಿ<br>ತ್ರವ | ಸಾಧ<br>ನುಗು | ಸಾಸಾ<br>ಳುವು | ಸಾ-<br>ದುಽ |
| ಧರಿ<br>ತೇಽ | ಸಾಸಾ<br>ಜಽ | ಪಧ<br>ಪುಂಽ | ಪಪ<br>ಜವು | ಧಧ<br>ಕೆರ | ಪ-<br>ಳೀಽ | ಸಾಸಾಧಪ<br>ಽಽಽಽ | ಮಮರಿಸಾ<br>ಽಽಽಽ |

# 4 ದಿ ಮದರ್



ರಾಗ : ನಾಯಕೀ ಕಾನಡಾ

ತಾಳ : ಝುಫ್‌ತಾಲ್



| 1<br>X | 2 | 3<br>— | 4 | 5 | 6<br>O | 7 | 8<br>— | 9 | 10 |
|---|---|---|---|---|---|---|---|---|---|
| ಗ̲<br>ಮಾ | ಗ̲<br>ಽ | ಮ<br>ಯೆ | ನಿ̲<br>ಯ | ಪ<br>ನು | 1<br>ನಿ̲<br>ಮೊ | ನಿ̲<br>ಲೆ | ಸಾ̇<br>ಗೊ | ಸಾ̇<br>ಳಿ | ಸಾ̇<br>ಸಿ |
| ಸಾ̇<br>ಹಾ | ನಿ̲<br>ಽ | ಸಾ̇<br>ಲ್ಲ | ಽ<br>ಡಿ | ರಿ̇<br>ಸಿ | ನಿ̲<br>ಈ | ಸಾ̇<br>ಽ | ಪ<br>ತಾ | ನಿ̲<br>ಽ | ಪ<br>ಯಿ |
| ಗ̇<br>ಗಾ | ಗ̲̇<br>ಽ | ಗ̲̇<br>ಽ | ಮ̇<br>ಯ | ಪ̇<br>ತ್ರಿ | ಗ̲̇<br>ಮಂ | ಮ̇<br>ಽ | ಸಾ̇<br>ತ್ರ | ರಿ̇<br>ಽ | ಸಾ̇<br>ಕ್ಕ |
| ನಿ̲<br>ಭಾ | ನಿ̲<br>ಽ | ಸಾ̇<br>ಽ | ಸಾ̇<br>ಽ | ರಿ̇<br>ಷ್ಯ | ನಿ̲<br>ಬ | ಸಾ̇<br>ರಿ | ಪ<br>ದ | ನಿ̲<br>ವ | ಪ<br>ಳ |
| ಮ<br>ಅ | ಮ<br>ಶ್ವ | ಮ<br>ಪ | ನಿ̲<br>ತಿ | ಪ<br>ಯ | ನಿ̲<br>ಉ | ನಿ̲<br>ಽ | ಸಾ̇<br>ಪಾ | ರಿ̇<br>ಽ | ಪ̇<br>ಸ್ಯ |
| ನಿ̲<br>ದೇ | ನಿ̲<br>ಽ | ಸಾ̇<br>ವ | ಸಾ̇<br>ತೆ | ರಿ̇<br>ಯು | ನಿ̲<br>ಸಾ | ಸಾ̇<br>ಽ | ಪ<br>ವಿ | ನಿ̲<br>ಽ | ಪ<br>ತ್ರಿ |

